# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ರಾಜ್ಯ ಪತ್ರಿಕೆ

| ಭಾಗ– IV-A | ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫) | ನಂ. ೧೬೧ |
|---|---|---|
| **Part– IV-A** | **Bangalore, Wednesday, February 26, 2014 (Phalguna 7, Shaka Varsha 1935)** | **No. 161** |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/31/LA Bill/2014, Bangalore, Dated: 26-2-2014**

The following Bill was introduced in Legislative Assembly on 26-2-2014

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**THIRD SESSION**

## THE KARNATAKA APPROPRIATION (VOTE ON ACCOUNT) BILL, 2014

**(L.A. Bill No. 31 of 2014)**

A Bill to authorize payment and appropriation of certain sums from and out of the Consolidated Fund of the State of Karnataka for the Services of the part of the Financial year **2014-15.**

Whereas it is expedient to authorize payment and appropriation of certain sums from and out of the Consolidated fund of the State for the services of the part of the Financial Year **2014-15.**

Be it enacted by the Karnataka State Legislature in the Sixty Fifth Year of the Republic of India as follows :-

**1. Short Title :** This Act may be called the Karnataka Appropriation (Vote on Account) Act, **2014.**

**2. Issue of Rupees 4719524.34** Lakhs out of the Consolidated Fund of the State of Karnataka for the part of the Financial year **2014-15 :** From and out of the Consolidated Fund of the State of Karnataka, there may be paid and applied sums not exceeding those specified in column 5 of the Schedule amounting in the aggregate to the sum of **Rupees forty-seven thousand one hundred ninety five crores twenty four lakhs thirty four thousand only** towards defraying the several charges which will come in the course of payment during the part the Financial Year 2014-15 in respect of the services specified in column 2 of the Schedule.

**3. Appropriation :-**The sums authorized to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

## SCHEDULE
## (See Sections 2 and 3)

(₹ in lakhs)

| | | | Sums not exceeding | | |
|---|---|---|---|---|---|
| **Demand No.** | **Service & Purpose** | | **voted by the Legislative Assembly** | **Charged on the consoli-dated Fund** | **Total** |
| **1** | **2** | | **3** | **4** | **5** |
| 01 | Agriculture and Horticulture | Revenue | 1,77,249.14 | 9.33 | 1,77,258.47 |
| | | Capital | 2,633.16 | ... | 2,633.16 |
| 02 | Animal Husbandry and Fisheries | Revenue | 58,460.18 | 3.47 | 58,463.65 |
| | | Capital | 7,480.54 | ... | 7,480.54 |
| 03 | Finance | Revenue | 4,10,099.35 | 9.67 | 4,10,109.02 |
| | | Capital | 598.94 | ... | 598.94 |
| 04 | Department of Personnel and | Revenue | 34,719.39 | 5,981.18 | 40,700.57 |
| | Administrative Reforms | Capital | 15,298.48 | ... | 15,298.48 |
| 05 | Home and Transport | Revenue | 1,61,862.18 | ... | 1,61,862.18 |
| | | Capital | 8,873.18 | ... | 8,873.18 |
| 06 | Infrastructure Development | Revenue | 283.97 | ... | 283.97 |
| | | Capital | 20,957.93 | ... | 20,957.93 |
| 07 | Rural Development and | Revenue | 2,55,200.50 | 479.95 | 2,55,680.45 |
| | Panchayath Raj | Capital | 56,316.53 | ... | 56,316.53 |
| 08 | Forest, Ecology and Environment | Revenue | 40,901.15 | 15,004.17 | 55,905.32 |
| | | Capital | 416.63 | ... | 416.63 |
| 09 | Co-operation | Revenue | 20,584.63 | ... | 20,584.63 |
| | | Capital | 1,625.84 | ... | 1,625.84 |
| 10 | Social Welfare | Revenue | 1,62,311.89 | ... | 1,62,311.89 |
| | | Capital | 53,511.02 | ... | 53,511.02 |
| 11 | Women and Child Development | Revenue | 1,19,052.76 | ... | 1,19,052.76 |
| | | Capital | 3,288.00 | ... | 3,288.00 |
| 12 | Information, Tourism and Youth | Revenue | 11,279.32 | ... | 11,279.32 |
| | Services | Capital | 9,818.94 | ... | 9,818.94 |
| 13 | Food and Civil Supplies | Revenue | 1,49,001.15 | 1.67 | 1,49,002.82 |
| | | Capital | 126.65 | ... | 126.65 |
| 14 | Revenue | Revenue | 1,38,653.65 | 1,039.90 | 1,39,693.55 |
| | | Capital | 3,380.33 | ... | 3,380.33 |
| 15 | Information Technology | Revenue | 6,216.00 | ... | 6,216.00 |
| | | Capital | 466.62 | ... | 466.62 |

## SCHEDULE

### (See Sections 2 and 3

**(` in lakhs)**

| | | | Sums not exceeding | | |
|---|---|---|---|---|---|
| **Demand No.** | **Service & Purpose** | | **voted by the Legislative Assembly** | **Charged on the consoli-dated Fund** | **Total** |
| **1** | **2** | | **3** | **4** | **5** |
| 16 | Housing | Revenue | 79,668.87 | ... | 79,668.87 |
| | | Capital | 2,217.44 | ... | 2,217.44 |
| 17 | Education | Revenue | 6,87,540.25 | ... | 6,87,540.25 |
| | | Capital | 22,542.91 | ... | 22,542.91 |
| 18 | Commerce and Industries | Revenue | 22,831.06 | ... | 22,831.06 |
| | | Capital | 9,672.44 | ... | 9,672.44 |
| 19 | Urban Development | Revenue | 2,58,324.59 | ... | 2,58,324.59 |
| | | Capital | 41,482.85 | ... | 41,482.85 |
| 20 | Public Works | Revenue | 86,320.05 | ... | 86,320.05 |
| | | Capital | 1,34,791.49 | ... | 1,34,791.49 |
| 21 | Water Resources | Revenue | 44,601.03 | ... | 44,601.03 |
| | | Capital | 2,67,008.58 | ... | 2,67,008.58 |
| 22 | Health and Family Welfare | Revenue | 1,83,416.47 | ... | 1,83,416.47 |
| | | Capital | 17,314.19 | ... | 17,314.19 |
| 23 | Labour | Revenue | 24,726.60 | ... | 24,726.60 |
| | | Capital | 1,109.89 | ... | 1,109.89 |
| 24 | Energy | Revenue | 2,24,584.65 | 100.00 | 2,24,684.65 |
| | | Capital | 30,066.66 | ... | 30,066.66 |
| 25 | Kannada and Culture | Revenue | 9,614.90 | ... | 9,614.90 |
| | | Capital | 201.65 | ... | 201.65 |
| 26 | Planning, Statistics, Science and | Revenue | 5,845.93 | ... | 5,845.93 |
| | Technology | Capital | 20,464.62 | ... | 20,464.62 |
| 27 | Law | Revenue | 20,879.83 | ... | 20,879.83 |
| | | Capital | 333.30 | ... | 333.30 |
| 28 | Parliamentary Affairs and Legislation | Revenue | 5,279.58 | 95.55 | 5,375.13 |
| 29 | Debt Servicing | Revenue | ... | 3,39,966.00 | 3,39,966.00 |
| | | Capital | ... | 2,25,325.57 | 2,25,325.57 |
| | **Total** | | **4,131,507.88** | **588,016.46** | **4,719,524.34** |

## STATEMENT OF OBJECTS AND REASONS

This Bill is introduced in pursuance of the provisions of Article 204 of the Constitution of India to provide for the appropriation out of the Consolidated Fund of the State towards defraying the several charges which will come in course of payment during the part of the Financial Year 2014-15 granted on Vote on Account under Article 206 (1) (a) .

**SIDDARAMAIAH**
Chief Minister and
Minister for Finance

**P. OMPRAKASHA**
Secretary
Karnataka Legislative Assembly



# ವಿಶೇಷ ರಾಜ್ಯ ಪತ್ರಿಕೆ

| ಭಾಗ – I | ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫) | ನಂ. ೧೬೨ |
|---|---|---|
| **Part – I** | **Bangalore, Wednesday, February 26, 2014 (Phalguna 7, Shaka Varsha 1935)** | **No. 162** |



## ಸಹಕಾರ ಸಚಿವಾಲಯ

**ವಿಷಯ :** 2014–15ನೇ ಸಾಲಿಗೆ ಯಶಸ್ವಿನಿ ಯೋಜನೆಯನ್ನು ಮುಂದುವರೆಸಲು ಹಾಗೂ ಸದಸ್ಯರುಗಳನ್ನು ನೋಂದಾಯಿಸಲು ಮಾರ್ಗಸೂಚಿಗಳನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಮಾರ್ಗಸೂಚಿ ಸುತ್ತೋಲೆ ಸಂಖ್ಯೆ: ಸಿಒ 21 ಸಿಎಲ್ಎಸ್ 2013–14, ದಿನಾಂಕ: 05.06.2013.

**ಪ್ರಸ್ತಾವನೆ:**

ಮೇಲೆ(1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿನ ಸುತ್ತೋಲೆಯಂತೆ ಯಶಸ್ವಿನಿ ಯೋಜನೆಯಲ್ಲಿ 2013–14ನೇ ಸಾಲಿನಲ್ಲಿ ನೊಂದಾಯಿಸಿಕೊಂಡ ಸದಸ್ಯರಿಗೆ ಯೋಜನೆಯ ಸವಲತ್ತು ದಿನಾಂಕ:31.07.2014ಕ್ಕೆ ಮುಕ್ತಾಯಗೊಳ್ಳುತ್ತಿರುವುದರಿಂದ, ರೈತ ಸಹಕಾರಿಗಳನ್ನು ನೋಂದಾಯಿಸಲು ಮಾರ್ಗಸೂಚಿಗಳನ್ನು ನೀಡಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/101/ಸಿಎಲ್ಎಸ್/2014, ಬೆಂಗಳೂರು ದಿನಾಂಕ: 26.02.2014**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಯಶಸ್ವಿನಿ ಸದಸ್ಯರನ್ನು ನೊಂದಾಯಿಸಲು ಈ ಕೆಳಕಂಡ ಮಾರ್ಗಸೂಚಿಗಳನ್ನು ಹೊರಡಿಸಿದೆ.

1. ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯು 2003–04ನೇ ಸಾಲಿನಿಂದ ರಾಜ್ಯದ ಗ್ರಾಮೀಣ ಸಹಕಾರಿಗಳಿಗೆ ಉತ್ತಮ ಗುಣಮಟ್ಟದ ಆರೋಗ್ಯ ರಕ್ಷಣೆಯನ್ನು ಒದಗಿಸಲು ಕರ್ನಾಟಕ ಸರ್ಕಾರ ಜಾರಿಗೊಳಿಸಿರುವ ಒಂದು ಸ್ವಯಂ–ನಿಧಿ ಶಸ್ತ್ರ ಚಿಕಿತ್ಸಾ ಯೋಜನೆಯಾಗಿದೆ. ಒಬ್ಬ ವ್ಯಕ್ತಿ ಗ್ರಾಮೀಣ ಸಹಕಾರ ಸಂಘಗಳಾದ ಸಹಕಾರ ಕೃಷಿಪತ್ತಿನ / ಗ್ರಾಮೀಣ ಕೃಷಿಯೇತರ ಸಹಕಾರ ಸಂಘಗಳ, ಗ್ರಾಮೀಣ ವಿವಿದ್ದೋದ್ದೇಶ ಸಹಕಾರ ಸಂಘಗಳ,ಹಾಲು ಉತ್ಪಾದಕರ ಸಹಕಾರ ಸಂಘಗಳ, ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘಗಳ, ತೋಟಗಾರಿಕಾ ಸಹಕಾರ ಸಂಘಗಳ (ಕೃಷಿ/ತೋಟಗಾರಿಕೆ/ಹೈನುಗಾರಿಕೆ ಉತ್ಪನ್ನಗಳ ಸಂಸ್ಕರಣ ಸಹಕಾರ ಸಂಘಗಳೂ ಸೇರಿ), ಕುರಿ ಸಾಕಾಣಿಕೆ ಮತ್ತು ಕುರಿ ಉತ್ಪನ್ನಗಳ ಸಹಕಾರ ಸಂಘಗಳು, ಸಹಕಾರಿ ಸಕ್ಕರೆ ಕಾರ್ಖಾನೆಗಳ, ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕುಗಳ, ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿನ ಮೀನುಗಾರರ, ಬೀಡಿಕಾರ್ಮಿಕರ ಮತ್ತು ನೇಕಾರ ಸಹಕಾರ ಸಂಘ ಇತ್ಯಾದಿಗಳೊಂದರ ಸದಸ್ಯನಾಗಿ ಕನಿಷ್ಠ ಮೂರು ತಿಂಗಳಾಗಿದ್ದಲ್ಲಿ, ಆತನು ಹಾಗೂ ಅವನ ಕುಟುಂಬದ ಎಲ್ಲಾ ಸದಸ್ಯರು 2014–15ನೇ ಸಾಲಿನಲ್ಲಿ ನಿಗದಿತ ವಂತಿಗೆಯನ್ನು ಪಾವತಿ ಮಾಡುವ ಮೂಲಕ ಯಶಸ್ವಿನಿ ಯೋಜನೆಯ ಸದಸ್ಯರಾಗಬಹುದು. ಅಲ್ಲದೆ ರಾಜ್ಯದ ಗ್ರಾಮೀಣ ಪ್ರದೇಶದ ಚಲನಚಿತ್ರಕಲಾವಿದರುಗಳ, ರಂಗಭೂಮಿಕಲಾವಿದರುಗಳ,ಜಾನಪದಕಲಾವಿದರುಗಳ ಸಾಂಸ್ಕೃತಿಕ ಅಭಿವೃದ್ಧಿ ಸಹಕಾರ ಸಂಘಗಳು, ಗ್ರಾಮೀಣ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿದ್ದು ಕಾಫಿ ಬೆಳೆಯುವ ಜಿಲ್ಲೆಗಳ ಕಾಫಿ ತೋಟಗಳಲ್ಲಿ ಕೆಲಸ ಮಾಡುತ್ತಿರುವ ಪ್ಲಾಂಟೇಷನ್ ಕಾರ್ಮಿಕರುಗಳು, ಗ್ರಾಮೀಣ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿರುವ ರಾಜ್ಯದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಕೃಷಿ ಕ್ಷೇತ್ರದಿಂದ ಆಯ್ಕೆಯಾಗಿರುವ ರೈತ ಪ್ರತಿನಿಧಿಗಳು, ಗ್ರಾಮೀಣ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿರುವ ಪತ್ರಕರ್ತರುಗಳು (ಪಟ್ಟಣ ಪ್ರದೇಶದ ಪತ್ರಕರ್ತ ಸದಸ್ಯರನ್ನು ಹೊರತುಪಡಿಸಿ), ರಾಜ್ಯದ ಗ್ರಾಮೀಣ ಪ್ರದೇಶದಲ್ಲಿರುವ ಅಲೆಮಾರಿ, ಅರೆ–ಅಲೆಮಾರಿ ಜನಾಂಗಗಳ ವಿವಿದ್ದೋದ್ದೇಶ ಸಹಕಾರಿ ಸಂಘಗಳ ಹಾಗೂ ಇತರೆ ವಿವಿದ್ದೋದ್ದೇಶ ಸಹಕಾರ ಸಂಘಗಳ ಸದಸ್ಯರು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ವತಿಯಿಂದ ಸಂಘಟಿಸಲ್ಪಟ್ಟಿರುವ ಎಲ್ಲಾ ಗ್ರಾಮೀಣ ಸ್ವ–ಸಹಾಯ ಗುಂಪು ಮತ್ತು ಸ್ತ್ರೀ–ಶಕ್ತಿ ಗುಂಪುಗಳ ಸದಸ್ಯರು, ಗ್ರಾಮೀಣ ಪ್ರದೇಶದಲ್ಲಿನ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿರುವ ಲೈಂಗಿಕ ಅಲ್ಪಸಂಖ್ಯಾತರು (ಮಂಗಳ ಮುಖಿಯರು), ಅಲ್ಲದೇ ಸಹಕಾರ ಸಂಘ/ಬ್ಯಾಂಕ್‌ಗಳೊಡನೆ ವ್ಯವಹರಿಸುತ್ತಿರುವ ಗ್ರಾಮೀಣ ಪ್ರದೇಶದಲ್ಲಿರುವ ಸ್ವ–ಸಹಾಯ ಗುಂಪು ಹಾಗೂ ಸ್ತ್ರೀ ಶಕ್ತಿ ಗುಂಪಿನ ಸದಸ್ಯರು ಮತ್ತು ಅವರ ಕುಟುಂಬದ ಸದಸ್ಯರು ಕೂಡ ಯೋಜನೆಯಲ್ಲಿ ಸದಸ್ಯರಾಗಲು ಅರ್ಹರಿರುತ್ತಾರೆ. ಆದರೆ ಅಂತಹ ಸ್ವಸಹಾಯ ಗುಂಪುಗಳು ಸ್ಥಾಪನೆ/ನೋಂದಾವಣೆಯಾಗಿ ಕನಿಷ್ಠ ಆರು ತಿಂಗಳು ಕಳೆದಿರಬೇಕು.

2. ಯಶಸ್ವಿನಿ ಯೋಜನೆಯ ಸೌಲಭ್ಯ ಪಡೆಯಲು ಒಬ್ಬ ವ್ಯಕ್ತಿಯು ಸಹಕಾರ ಸಂಘದ ಸದಸ್ಯನಾಗಿರಬೇಕು. ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಅಡಿ ಅಥವಾ ಕರ್ನಾಟಕ ಸೌಹಾರ್ದ ಸಹಕಾರ ಅಧಿನಿಯಮ 1997ರ ಅಡಿ ಅಥವಾ ಬಹು ರಾಜ್ಯ ಸಹಕಾರ ಸಂಘಗಳ ಅಧಿನಿಯಮ 2007ರ ಅಡಿ ನೋಂದಾಯಿಸಿದ ಹಾಗೂ ಮೇಲೆ ಸೂಚಿಸಿರುವ ಯಾವುದೇ ಒಂದು ಸಹಕಾರ ಸಂಘದಲ್ಲಿ ಸದಸ್ಯತ್ವ ಪಡೆದು 01.06.2014ಕ್ಕೆ ಕನಿಷ್ಠ 3 ತಿಂಗಳಾಗಿರಬೇಕು.

3. ಆದಾಗ್ಯೂ ನಗರ/ ಪಟ್ಟಣದ ಜೊತೆಗೆ ಮಹಾನಗರ ಪಾಲಿಕೆ ವ್ಯಾಪ್ತಿಗೆ ಒಳಪಟ್ಟಿರುವ ಪ್ರದೇಶದಲ್ಲಿನ ಕೃಷಿ ಪತ್ತಿನ ಸಹಕಾರ ಸಂಘಗಳ/ಹಾಲು ಉತ್ಪಾದಕರ ಸಹಕಾರ ಸಂಘಗಳ ಸದಸ್ಯರು ಮಹಾನಗರಪಾಲಿಕೆ/ನಗರ/ಪಟ್ಟಣ ಪ್ರದೇಶದಲ್ಲಿ ವಾಸಿಸುತ್ತಿದ್ದು, ಅವರು ಸದಸ್ಯತ್ವ ಹೊಂದಿರುವ ಸಹಕಾರ ಸಂಘಗಳ ವ್ಯಾಪ್ತಿಯಲ್ಲಿ ಕೃಷಿ ಜಮೀನು ಹೊಂದಿರುವವರು, ಈಗಾಗಲೇ ಕಳೆದ ಸಾಲುಗಳಲ್ಲಿ ಯೋಜನೆಯಡಿಯಲ್ಲಿ ಸದಸ್ಯತ್ವ ನೋಂದಾವಣೆಯಾಗಿದ್ದಲ್ಲಿ, ಪ್ರಸಕ್ತ ಸಾಲಿಗೂ ಸಹ ಅಂತಹವರುಗಳು ಯೋಜನೆಯಡಿಯಲ್ಲಿ ನವೀಕರಿಸಲು /ನೋಂದಾಯಿಸಲು ಅರ್ಹರಾಗಿತ್ತಾರೆ.

4. ಅವಿಭಕ್ತ ಕುಟುಂಬದ ಯಾವುದೇ ಒಬ್ಬ ಸದಸ್ಯನು/ಸದಸ್ಯಳು ಮೇಲೆ ತಿಳಿಸಿರುವ ಅರ್ಹ ಸಹಕಾರ ಸಂಘದ ಸದಸ್ಯನಾಗಿ/ಳಾಗಿ ಯಶಸ್ವಿನಿ ವರ್ಷದ ಮೊದಲ ದಿನ **ಅಂದರೆ 01.06.2014ಕ್ಕೆ 3 ತಿಂಗಳಾಗಿದ್ದಲ್ಲಿ,** ಅಂತಹ ಕುಟುಂಬದ ಪ್ರತಿಯೊಬ್ಬ ಸದಸ್ಯನೂ ನಿಗದಿತ ಅವಧಿಯಲ್ಲಿ ವಾರ್ಷಿಕ ವಂತಿಗೆ ಸಲ್ಲಿಸುವ ಮೂಲಕ ಯಶಸ್ವಿನಿ ಯೋಜನೆಯ ಸೌಲಭ್ಯ ಪಡೆಯಬಹುದು. ಅವಿಭಕ್ತ ಕುಟುಂಬ ಅಂದರೆ ತಂದೆ, ತಾಯಿ, ಗಂಡು/ ಮದುವೆಯಾಗದ ಹೆಣ್ಣು ಮಕ್ಕಳು, ಸೊಸೆ, ಮೊಮ್ಮಕ್ಕಳೂ ಸೇರಿ ಎಂದು ಅರ್ಥೈಯಿಸುವುದು.

5. ಮದುವೆಯಾಗಿರುವ ಹೆಣ್ಣು ಮಗಳು ಹಾಗೂ ಅವಳ ಮಕ್ಕಳು ತಂದೆ/ತಾಯಿ/ಅಣ್ಣ/ತಮ್ಮ ಇವರ ಕುಟುಂಬದಲ್ಲಿಯೇ ಅಂದರೆ ಪ್ರಧಾನ ಅರ್ಜಿದಾರರ ಕುಟುಂಬದಲ್ಲಿ ವಾಸವಾಗಿದ್ದರೆ, ಅವರ ಪಾಲಿನ ವಂತಿಗೆ ಹಣ ಪಾವತಿಸಿದರೆ ನವೀಕರಣ/ನೋಂದಾವಣೆಗೆ ಹಾಗೂ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ. ಆದಾಗ್ಯೂ, 2014–15ನೇ ಸಾಲಿನ ಯೋಜನೆಯ ಅವಧಿಯಲ್ಲಿ ಮದುವೆಯಾದ ಹೆಣ್ಣು ಮಗಳು ತಂದೆ/ತಾಯಿ/ಅಣ್ಣ/ತಮ್ಮ ಇವರ ಜೊತೆ ವಾಸವಾಗಿರದೆ ಸಂಘದ ಕಾರ್ಯವ್ಯಾಪ್ತಿಯ ಹೊರಗೆ ವಾಸವಿದ್ದರೆ ಅಂಥಹ ಸಂದರ್ಭದಲ್ಲಿ ಮೇಲೆ ವಿವರಿಸಿದಂತೆ ಅವಿಭಕ್ತ ಕುಟುಂಬದ ಸದಸ್ಯೆಯಾಗಿ ಯೋಜನೆಯ ಸೌಲಭ್ಯವನ್ನು ಪಡೆಯಲು ಅರ್ಹರಾಗುವುದಿಲ್ಲ. ಆದರೆ, ಅವಳೇ ಸಹಕಾರ ಸಂಘದ ಸದಸ್ಯೆಯಾಗಿ ಯಶಸ್ವಿನಿ ವರ್ಷದ ಮೊದಲ ದಿನಕ್ಕೆ 3 ತಿಂಗಳು ಕಳೆದಿದ್ದಲ್ಲಿ, ಈ ನಿರ್ಬಂಧ ಅಂಥವಳಿಗೆ ಅನ್ವಯಿಸುವುದಿಲ್ಲ. ಮದುವೆಯಾಗಿ ಗಂಡನ ಮನೆಯಲ್ಲಿ ವಾಸ ಮಾಡುತ್ತಿರುವ ಹಾಗೂ ಪ್ರಧಾನ ಅರ್ಜಿದಾರರ ಜೊತೆಯಲ್ಲಿ ವಾಸ ಮಾಡದೇ ಇರುವ ಹೆಣ್ಣು ಮಕ್ಕಳಿಂದ ಸಹಕಾರ ಸಂಘಗಳು ವಂತಿಗೆಯನ್ನು ಸ್ವೀಕರಿಸತಕ್ಕದಲ್ಲ.

6. 2014–15ನೇ ಸಾಲಿನಲ್ಲಿ ಮದುವೆಯಾಗದ ಹೆಣ್ಣುಮಕ್ಕಳಿಗೆ ಪ್ರಧಾನ ಅರ್ಜಿದಾರರು ವಂತಿಗೆ ಪಾವತಿಸಿದ್ದು, ಆನಂತರ ಮದುವೆಯಾಗಿದ್ದಲ್ಲಿ ಅಂತಹ ಮದುವೆಯಾದ ಹೆಣ್ಣು ಮಕ್ಕಳಿಗೆ 2014–15ನೇ ಸಾಲಿನಲ್ಲಿ 31.05.2015ರವರೆಗೆ ಯಶಸ್ವಿನಿ ಯೋಜನೆಯಡಿಯಲ್ಲಿ ಸೌಲಭ್ಯವನ್ನು ಪಡೆಯಬಹುದಾಗಿದೆ.

7. **2014–15ನೇ ಸಾಲಿಗೆ ಯಶಸ್ವಿನಿ ವಾರ್ಷಿಕ ವಂತಿಗೆಯನ್ನು ಪ್ರತಿಯೊಬ್ಬರಿಗೆ ರೂ.250/–ಕ್ಕೆ ನಿಗದಿಗೊಳಿಸಲಾಗಿದೆ.** ಈ ಯೋಜನೆಯ ಪ್ರಯೋಜನ ಪಡೆಯಲು ಉದ್ದೇಶಿಸುವ ಪ್ರತಿಯೊಬ್ಬರು ರೂ.250/– ರಂತೆ ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಉದ್ದೇಶಿಸಿದ ಪ್ರತಿಯೊಬ್ಬ ಸದಸ್ಯರಿಗೆ ಕಡ್ಡಾಯವಾಗಿ ಪಾವತಿ ಮಾಡಬೇಕು. ಈ ಪೈಕಿ ರೂ.10/– ಅನ್ನು ಸಂಘದ ಸಾದಿಲ್ವಾರು ವೆಚ್ಚಕ್ಕೆ ಮತ್ತು ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸಲು ಶ್ರಮಿಸಿದವರಿಗೆ ಪ್ರೋತ್ಸಾಹಧನವಾಗಿ ಸಹಕಾರ ಸಂಘ/ಸಂಸ್ಥೆಯು ಇಟ್ಟುಕೊಂಡು, ಉಳಿದ ರೂ.240/–ಗಳನ್ನು ಹಣ ಸ್ವೀಕರಿಸಿದ 15 ದಿನಗಳೊಳಗಾಗಿ ಸಂಬಂಧಿಸಿದ ಜಿಲ್ಲಾ ಸಹಕಾರಿ ಬ್ಯಾಂಕುಗಳಲ್ಲಿ ಯಶಸ್ವಿನಿ ಟ್ರಸ್ಟ್ ಹೊಂದಿರುವ ಖಾತೆಗೆ ಜಮಾ ಮಾಡಬೇಕು/ವರ್ಗಾಯಿಸತಕ್ಕದ್ದು. ವಿಳಂಬವಾದಲ್ಲಿ ಆ ಹಣವನ್ನು ಇಟ್ಟುಕೊಂಡ ಸಹಕಾರಿ ಸಂಘ/ಸಂಸ್ಥೆಯವರು ಬ್ಯಾಂಕಿನ ನಿಯಮಗಳ ಪ್ರಕಾರ ವಿಳಂಬದ ಅವಧಿಗೆ ಬಡ್ಡಿ ಪಾವತಿ ಮಾಡಲು ಬದ್ಧರಾಗುತ್ತಾರೆ.

8. ಒಂದೇ ಕುಟುಂಬದ ಸದಸ್ಯರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸಿದಲ್ಲಿ, ನೀಡಲಾಗುತ್ತಿರುವ ವಿಶೇಷ ರಿಯಾಯಿತಿಯನ್ನು ಪ್ರಸಕ್ತ ವರ್ಷ ಅಂದರೆ 2014–15ನೇ ಸಾಲಿಗೂ ಮುಂದುವರಿಸಲಾಗಿದೆ. ಯಾವುದೇ ಒಂದು ಕುಟುಂಬದಲ್ಲಿ ಐವರು ಅಥವಾ ಅದಕ್ಕಿಂತ ಹೆಚ್ಚಿಗೆ ಕುಟುಂಬ ಸದಸ್ಯರನ್ನು ಯಶಸ್ವಿನಿ ಸದಸ್ಯರನ್ನಾಗಿ ನೋಂದಾಯಿಸಿದಲ್ಲಿ/ನವೀಕರಿಸಿದಲ್ಲಿ ಅವರು ಪಾವತಿಸಬೇಕಾದ ವಂತಿಗೆ ಹಣದಲ್ಲಿ ಅಂದರೆ ಪ್ರತಿ ಸದಸ್ಯರಿಗೆ ರೂ.240/–ರಲ್ಲಿ ಶೇ.15 ರಿಯಾಯಿತಿ ಪಡೆಯಲು ಅರ್ಹರಿರುತ್ತಾರೆ.

9. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಸಹಕಾರ ಸಂಘಗಳ ಸದಸ್ಯರು ವಾರ್ಷಿಕ ವಂತಿಗೆ ರೂ 50/–ನ್ನು ಪಾವತಿಸಿ 2014–15ನೇ ಸಾಲಿನಲ್ಲೂ ಸಹ ಸದಸ್ಯರಾಗಬಹುದು ಹಾಗೂ ನವೀಕರಿಸಿಕೊಳ್ಳಬಹುದು. ಈ ಪೈಕಿ ರೂ.10/– ಅನ್ನು ಸಂಘದ ಸಾದಿಲ್ವಾರು ವೆಚ್ಚಕ್ಕೆ ಮತ್ತು ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸಲು ಶ್ರಮಿಸಿದವರಿಗೆ ಪ್ರೋತ್ಸಾಹಧನವಾಗಿ ಸಹಕಾರ ಸಂಘ/ಸಂಸ್ಥೆಯು ಇಟ್ಟುಕೊಂಡು, ಉಳಿದ ರೂ.40/–ಗಳನ್ನು ಯಶಸ್ವಿನಿ ಟ್ರಸ್ಟ್‌ಗೆ ಪಾವತಿಸಬೇಕು. ಉಳಿದ ರೂ.200/–ಗಳ ವಂತಿಗೆಯನ್ನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸದಸ್ಯರಿಗೆ ಸರ್ಕಾರದ ವತಿಯಿಂದಲೇ ಭರಿಸಲಾಗುವುದು.

10. ಯಶಸ್ವಿನಿ ಸದಸ್ಯರಾಗಲು ನಿಗದಿಗೊಳಿಸಿದ ಗರಿಷ್ಠ ವಯೋಮಿತಿ 75 ವರ್ಷ ಮುಂದುವರೆದಿರುತ್ತದೆ. ಅಂದರೆ ಯಾವುದೇ ಒಬ್ಬ ವ್ಯಕ್ತಿಯು ಯೋಜನೆಯ ಸೌಲಭ್ಯವನ್ನು ಪಡೆಯಲು ಯಶಸ್ವಿನಿ ವರ್ಷ ಪ್ರಾರಂಭ ಆಗುವ ದಿನ ಅಂದರೆ 01.06.2014ಕ್ಕೆ 75 ವರ್ಷಗಳು ಪೂರ್ಣಗೊಂಡಿದ್ದರೆ ಯೋಜನೆಯ ಸೌಲಭ್ಯವನ್ನು ಪಡೆಯಲು ಅರ್ಹನಾಗುವುದಿಲ್ಲ.

11. ನವಜಾತ ಶಿಶುವಿನ ತಾಯಿಯ ಹೆಸರು ಯಶಸ್ವಿನಿ ಕಾರ್ಡ್‌ನಲ್ಲಿದ್ದರೆ 30 ದಿನಗಳವರೆಗೆ ತಾಯಿ ಹೆಸರು ಇರುವ ಕಾರ್ಡಿನ ಆಧಾರದ ಮೇಲೆ ಈ ಯೋಜನೆಯಡಿಯಲ್ಲಿ ಬರುವ ಸೌಲಭ್ಯವನ್ನು ಪಡೆಯಬಹುದು. 30 ದಿನಗಳ ನಂತರದಲ್ಲಿ ಮಗುವಿನ ಹೆಸರಿನೊಂದಿಗೆ ಆ ವರ್ಷದಲ್ಲಿ ಯಾವ ಸಂದರ್ಭದಲ್ಲಿಯೂ ನೋಂದಾಯಿಸಿಕೊಂಡು ಯೋಜನೆಯ ಸವಲತ್ತು ಪಡೆಯಬಹುದು.

**12.** ಯಶಸ್ವಿನಿ ಯೋಜನೆಯು ಒಂದು ಸ್ವಂತ ಬಂಡವಾಳ ಯೋಜನೆಯಾಗಿದ್ದು, ಯೋಜನೆಯಡಿ ಸದಸ್ಯರಿಂದ ಸಂಗ್ರಹಿಸಿದ ವಂತಿಗೆಯ ಮೊತ್ತಕ್ಕಿಂತ ಶಸ್ತ್ರಚಿಕಿತ್ಸಾ ವೆಚ್ಚ ಪ್ರತಿ ವರ್ಷ ಹೆಚ್ಚಿಗೆ ಪಾವತಿ ಆಗುತ್ತಿದೆ. ಯೋಜನೆಯ ಸಬಲತೆಯ ದೃಷ್ಟಿಯಿಂದ ಹೆಚ್ಚಿನ ಪ್ರಮಾಣದಲ್ಲಿ ಸದಸ್ಯರುಗಳನ್ನು ನೋಂದಾಯಿಸಲು ಪ್ರಯತ್ನಿಸುವುದು ಅತೀ ಅವಶ್ಯವಾಗಿದೆ. 2003–04ರಲ್ಲಿ ಯೋಜನೆಯನ್ನು ಸುಮಾರು 16.00 ಲಕ್ಷ ಸದಸ್ಯರುಗಳ ನೋಂದಾವಣೆಯೊಂದಿಗೆ ಪ್ರಾರಂಭಿಸಲಾಗಿದ್ದು, ಪ್ರತಿ ವರ್ಷಗಳಲ್ಲಿ ನೋಂದಾವಣೆ ಪ್ರಗತಿಯಾಗುತ್ತಾ ಬಂದಿದ್ದು, 2013–14ನೇ ಸಾಲಿನಲ್ಲಿ ಗರಿಷ್ಠ 37.97 ಲಕ್ಷ ಸದಸ್ಯರ ನೋಂದಾವಣೆ ಆಗಿರುತ್ತದೆ. ಗ್ರಾಮೀಣ ಪ್ರದೇಶದ ಸಹಕಾರ ಸಂಘಗಳ ಸದಸ್ಯರ ಸಂಖ್ಯೆಯೇ ಸುಮಾರು 1.25 ಕೋಟಿ ಇರುವುದನ್ನು ಮತ್ತು ಗ್ರಾಮೀಣ ಪ್ರದೇಶದ ಸ್ತ್ರೀ ಶಕ್ತಿ ಗುಂಪು/ ಸ್ವಸಹಾಯ ಗುಂಪುಗಳ ಸದಸ್ಯರ ಸಂಖ್ಯೆಯನ್ನು ಗಮನಿಸಿದಾಗ ಯೋಜನೆಯಲ್ಲಿ ಸದಸ್ಯರಾಗದವರ ಸಂಖ್ಯೆ ಹೆಚ್ಚಿಗೆ ಇರುತ್ತದೆ. ಆದ್ದರಿಂದ, 2014–15ನೇ ಸಾಲಿನಲ್ಲಿ ಕನಿಷ್ಠ 50.00ಲಕ್ಷ ಸದಸ್ಯರುಗಳನ್ನು ನೋಂದಾಯಿಸುವ ಗುರಿ ನಿಗದಿಪಡಿಸಲಾಗಿದೆ. ಪ್ರತಿ ಜಿಲ್ಲೆಯ ಪರಿಸ್ಥಿತಿಯನ್ನು ಗಮನದಲ್ಲಿಟ್ಟು ಸಹಕಾರ ಸಂಘಗಳ ನಿಬಂಧಕರು ಪ್ರತಿ ಜಿಲ್ಲೆಗೆ ಪ್ರತ್ಯೇಕ ಗುರಿ ನಿಗದಿಗೊಳಿಸುವಂತೆ ಸೂಚಿಸಲಾಗಿದೆ.

**13.** 2013–14ನೇ ಸಾಲಿನಲ್ಲಿ 37.97 ಲಕ್ಷ ಸದಸ್ಯರನ್ನಾಗಿ ನೋಂದಾಯಿಸಿದ್ದು, ಅವರೆಲ್ಲರೂ **2014–15 ನೇ ಸಾಲಿಗೆ ಯಶಸ್ವಿನಿ** ಸದಸ್ಯರುಗಳನ್ನಾಗಿ **ನವೀಕರಿಸುವಂತೆ ನೋಡಿಕೊಳ್ಳತಕ್ಕದ್ದು ಮತ್ತು ಒಟ್ಟು ನೋಂದಾವಣೆಯಲ್ಲಿ ಗಣನೀಯ ಸಾಧನೆ ಮಾಡಿ 50.00 ಲಕ್ಷ ಸದಸ್ಯರುಗಳನ್ನು ಯಶಸ್ವಿನಿ ಯೋಜನೆಯಲ್ಲಿ ನೋಂದಾಯಿಸಬೇಕು.**

**14.** **2014–15ನೇ ಸಾಲಿಗೆ ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ ಕಾರ್ಯಕ್ರಮವನ್ನು ಈ ಕೆಳಗಿನಂತೆ ನಿಗದಿಗೊಳಿಸಲಾಗಿದೆ.**

ಅ) ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ/ ನವೀಕರಿಸುವ ಪ್ರಕ್ರಿಯೆಯನ್ನು **ಪ್ರಾರಂಭ ಮಾಡುವ ದಿನಾಂಕ: 15.03.2014.**

ಆ) ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ/ ನವೀಕರಿಸುವ **ಕೊನೆಯ ದಿನಾಂಕ: 31.05.2014.**

15. ಯಶಸ್ವಿನಿ ಯೋಜನೆಯಡಿಯಲ್ಲಿ 2013–14ನೇ ಸಾಲಿನಲ್ಲಿ ಸದಸ್ಯರಾಗಿದ್ದವರಿಗೆ ನವೀಕರಿಸಲು ಮುಕ್ತಾಯ ದಿನಾಂಕ: 31.05.2014, ಆದರೆ 2013–14ನೇ ಸಾಲಿನಲ್ಲಿ ನೀಡಲಾದ ಕಾರ್ಡಿನ ಮೇಲೆಯೇ 31–7–2014ರವರೆಗೂ ಯಶಸ್ವಿನಿ ಯೋಜನೆಯ ಸೌಲಭ್ಯವನ್ನು ಪಡೆಯಲು ಅರ್ಹರಿರುತ್ತಾರೆ. ಯಾರು ದಿನಾಂಕ: 31–5–2014ರೊಳಗೆ ನವೀಕರಣ ಮಾಡಿಕೊಳ್ಳುತ್ತಾರೆಯೋ ಅಂತಹವರಿಗೆ ಮಾತ್ರ 2014–15ನೇ ಸಾಲಿನಲ್ಲಿ ಯಶಸ್ವಿನಿ ಸೌಲಭ್ಯಕ್ಕೆ ದಿನಾಂಕ:01–08–2014ರಿಂದ ಅರ್ಹರು ಮತ್ತು ಅವರಿಗೂ ಸಹ ಯೋಜನೆಯ ಅವಧಿ ದಿನಾಂಕ:01–06–2014 ರಿಂದ ದಿನಾಂಕ:31–05–2015 ಅನ್ವಯವಾಗುತ್ತದೆ.

**16.** ಯಶಸ್ವಿನಿ ಯೋಜನೆಯಡಿಯಲ್ಲಿ ಮೇಲೆ ನಮೂದಿಸಿದ ದಿನಾಂಕಗಳ ನಂತರದ ಅವಧಿ ಮುಂದುವರಿಯದಿದ್ದಲ್ಲಿ, ಯಶಸ್ವಿನಿ ಸದಸ್ಯರುಗಳ ನೋಂದಾಯಿಸುವಿಕೆಗೆ/ ನವೀಕರಣಕ್ಕೆ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಒಂದು ವೇಳೆ ನಿಗದಿತ ದಿನಾಂಕಗಳ ನಂತರ ನೋಂದಾಯಿಸಿದಲ್ಲಿ ಅಂಥವರು ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗುವುದಿಲ್ಲ.

**17.** 2014–15ನೇ ಸಾಲಿನಲ್ಲಿ ಯಶಸ್ವಿನಿ ಸದಸ್ಯರುಗಳನ್ನು ಹೊಸದಾಗಿ ನೋಂದಾಯಿಸಲು 2013–14ನೇ ಸಾಲಿನಲ್ಲಿ ಸರಬರಾಜು ಮಾಡಿರುವ ಹೊಸ ನೋಂದಾವಣಿ ಫಾರಂಗಳನ್ನು ಮಾತ್ರ ಎಲ್ಲರಿಗೂ ಉಪಯೋಗಿಸಬೇಕು ಮತ್ತು ಗುರುತಿನ ಚೀಟಿ ಒದಗಿಸಬೇಕು. ಬೇರೆ ಯಾವುದೇ ವರ್ಷಗಳಲ್ಲಿ ನೀಡಿರುವ ಫಾರಂಗಳನ್ನು ಉಪಯೋಗಿಸತಕ್ಕದ್ದಲ್ಲ

**18.** 2013–14ನೇ ಸಾಲಿನ ಸರಬರಾಜಿನಲ್ಲಿ ಉಳಿದ ಫಾರಂಗಳನ್ನು ಮಾತ್ರ 2014–15ನೇ ಸಾಲಿಗೆ ಉಪಯೋಗಿಸಬೇಕು, ಹಾಗೆಯೇ ಉಪಯೋಗಿಸುವಾಗ **ನೋಂದಾವಣೆ ಅರ್ಜಿಯಲ್ಲಿ 2014–15ನೇ ಸಾಲಿನ ಯೋಜನಾ ಪ್ರಾರಂಭ ದಿನಾಂಕ:01.06.2014 ಮತ್ತು ಮುಕ್ತಾಯದ ದಿನಾಂಕ:31.05.2015 ಎಂದು ಹಾಗೂ ನೋಂದಾವಣಿ ಫಾರಂಗಳ 2 ಭಾಗಗಳಲ್ಲೂ ರೂ.210/– ಎಂಬುದನ್ನು ರೂ.240/– ಎಂದು ತಿದ್ದಿ ಆಯಾ ಸಂಘದ ಕಾರ್ಯದರ್ಶಿಗಳು ಅವರ ಪೋಟಾ ಸಹಿ ಮಾಡಿ ಸಂಘದ ಮೊಹರು ಹಾಕಬೇಕು.**

ಆನಂತರ ಈ ವರ್ಷಕ್ಕೆ ಯಶಸ್ವಿನಿ ಟ್ರಸ್ಟನಿಂದ ಸರಬರಾಜು ಮಾಡಿದ ನೋಂದಣಿ ಫಾರಂಗಳನ್ನು ಉಪಯೋಗಿಸಬೇಕು, ನೋಂದಾವಣೆಗೆ ಬೇಕಾದ ಅವಶ್ಯಕ ಸಂಖ್ಯೆಯ ಫಾರಂಗಳನ್ನು ಸಹಕಾರ ಸಂಘಗಳ ಉಪನಿಬಂಧಕರುಗಳು ಯಶಸ್ವಿನಿ ಟ್ರಸ್ಟ್ ಕಛೇರಿಯಿಂದ ಪಡೆದು ಅವರ ವ್ಯಾಪ್ತಿಯ ಸಹಕಾರ ಸಂಘಗಳ ಕಾರ್ಯದರ್ಶಿಗಳಿಗೆ ಫಾರಂ ಪುಸ್ತಕಗಳನ್ನು ಹಂತ–ಹಂತವಾಗಿ ಪೂರೈಸಿ ಸ್ವೀಕೃತಿ ಪಡೆಯಬೇಕು. ಒಮ್ಮೆ ಪೂರೈಸಿದ ಫಾರಂಗಳಲ್ಲಿ ಸಹಕಾರ ಸಂಘದವರು ಮಾಹಿತಿಯನ್ನು ಪೂರ್ತಿಯಾಗಿ ನಮೂದಿಸಿ ವಂತಿಗೆ ಹಣವನ್ನು ಬ್ಯಾಂಕಿಗೆ ಪಾವತಿ ಮಾಡಿದ ನಂತರವೇ ಮತ್ತೆ ಫಾರಂಗಳನ್ನು ಒದಗಿಸಬೇಕು. ಸಹಕಾರ ಸಂಘಕ್ಕೆ ಫಾರಂ ಪೂರೈಸುವಾಗ ಪುಸ್ತಕದ ಸಂಖ್ಯೆ ಮತ್ತು ಯುನಿಕ್ ಐ.ಡಿ ಸಂಖ್ಯೆಯನ್ನು ನಮೂದಿಸಿ ಕಾರ್ಯದರ್ಶಿಯಿಂದ ಸ್ವೀಕೃತಿ ಪಡೆದುಕೊಳ್ಳಬೇಕು. ಈ ಬಗ್ಗೆ ಪರಿಶೀಲನೆಗಾಗಿ ಪ್ರತ್ಯೇಕ ಪುಸ್ತಕದಲ್ಲಿ ಬರೆದಿಟ್ಟಿರಬೇಕು. ನವೀಕರಣಕ್ಕಾಗಿ ವೆಬ್‌ಸೈಟ್‌ನಲ್ಲಿರುವ ಫಾರಂನ್ನು ಉಪಯೋಗಿಸಬೇಕು. **ನವೀಕರಿಸಿ ಕೊಂಡ ಸದಸ್ಯರಿಗೆ ಹೊಸದಾಗಿ ಐಡಿ ಕಾರ್ಡ್ ಕೊಡತಕ್ಕದಲ್ಲ,** ಅವರಿಗೆ ಹಣ ಪಾವಿತಿಸಿದ್ದಕ್ಕೆ ರಶೀತಿ ಕೊಟ್ಟು, ರಶೀತಿಯಲ್ಲಿ ಈಗಾಗಲೇ ನೀಡಿರುವ ಕಾರ್ಡ್‌ನ ಯುನಿಕ್ ಐಡಿ ನಂಬರ್‌ನ್ನು ನಮೂದಿಸಬೇಕು ಮತ್ತು ಪಾವತಿಸಿದ **ತಿಂಗಳು, ವರ್ಷ ಮತ್ತು ದಿನಾಂಕವನ್ನು ತಪ್ಪದೆ ನಮೂದಿಸಬೇಕು.** ಸಹಕಾರ ಸಂಘಗಳ ಕಾರ್ಯದರ್ಶಿಗಳು ನವೀಕರಣಕ್ಕಾಗಿ ಭರ್ತಿಮಾಡಿದ ನವೀಕರಣದ ಫಾರಂಗಳನ್ನು ಡಾಟಾ ಎಂಟ್ರಿಗೆ ಕಳುಹಿಸಬೇಕು. ನವೀಕರಿಸಿಕೊಂಡ ಸದಸ್ಯರು ಈ ಹಿಂದೆ ಪಡೆದ **ಐಡಿ ಕಾರ್ಡ್‌ನೊಡನೆ, 2014–15ನೇ ಸಾಲಿಗೆ ವಾರ್ಷಿಕ ವಂತಿಗೆ ಪಾವತಿಸಿದ ರಶೀತಿಯನ್ನು ನೆಟ್‌ವರ್ಕ್ ಆಸ್ಪತ್ರೆಗಳಿಗೆ ಚಿಕಿತ್ಸೆ ಪಡೆಯಲು ಹಾಜರುಪಡಿಸಬೇಕು.** **ಹೊಸದಾಗಿ ನೋಂದಾಯಿಸಿಕೊಂಡವರಿಗೆ** ನೋಂದಾವಣೆ ಫಾರಂನ ಕೆಳಭಾಗವನ್ನು ಸದಸ್ಯರಿಗೆ ಕೊಡಬೇಕು. ಮೇಲ್ಭಾಗವನ್ನು ಡಾಟಾ ಎಂಟ್ರಿ ಮಾಡಲು ಸಂಬಂಧಿಸಿದ ಜಿಲ್ಲೆಯ ಸಹಕಾರ ಸಂಘಗಳ ಉಪನಿಬಂಧಕರ ಕಛೇರಿಗೆ ನೀಡಬೇಕು. ನೋಂದಾವಣೆ ಅವಧಿಯಲ್ಲಿ ಪ್ರತಿ ತಿಂಗಳ ಕೊನೆಯಲ್ಲಿ ಸಂಗ್ರಹಿಸಿದ ವಂತಿಗೆಯ ಹಣವನ್ನು ಬ್ಯಾಂಕಿಗೆ ಜಮೆ ಮಾಡಿ ರಶೀದಿಯೊಂದಿಗೆ ಕಳಿಸಬೇಕು ಮತ್ತು ಆಗಿಂದಾಗ್ಗೆ ಡಾಟಾ ಎಂಟ್ರಿ ಮಾಡಲು ಅನುಕೂಲವಾಗುವಂತೆ ಪ್ರತಿತಿಂಗಳ ಕೊನೆಯಲ್ಲಿ ಹೊಸ ನೋಂದಾವಣೆ ಅರ್ಜಿ/ ನವೀಕರಣವಾದವರ ವಿವರ ಮತ್ತು ನವೀಕರಣದ ಸಂದರ್ಭದಲ್ಲಿ ಹೊಸ ಸದಸ್ಯರುಗಳ ಸೇರ್ಪಡೆಯನ್ನು ಆಡ್ ಆನ್ ಕಾರ್ಡ್‌ನಲ್ಲಿ ಪೋಟೋ ಅಂಟಿಸಿ, ಎಲ್ಲಾ ವಿವರಗಳೊಂದಿಗೆ ಹೊಸದಾಗಿ ನೋಂದಾಯಿಸಿದ ಮತ್ತು ನವೀಕರಣವಾದ ಸದಸ್ಯರುಗಳ ತಖ್ತೆಯೊಂದಿಗೆ ಸಹಕಾರ ಸಂಘಗಳ ಉಪನಿಬಂಧಕರ ಕಛೇರಿಗೆ ನೀಡಿ ಸ್ವೀಕೃತಿ ಪಡೆಯಬೇಕು.

19. ಈ ಹಿಂದೆ ಯಶಸ್ವಿನಿ ಸದಸ್ಯರಿಗೆ ನೀಡಲಾಗುತ್ತಿದ್ದ ಗುರುತಿನ ಚೀಟಿ ಮತ್ತು ರಶೀದಿಯ ಹಿಂಭಾಗದಲ್ಲಿ ನೋಂದಾಯಿಸಿದ ಫೋಟೋ ಅಂಟಿಸುವ ಪದ್ಧತಿ ಇರಲಿಲ್ಲ. ವೆಬ್‌ಸೈಟ್‌ನಲ್ಲಿ ಸದಸ್ಯರ ಫೋಟೋ ಸಹಿತ ಮಾಹಿತಿಯನ್ನು ಅಳವಡಿಸುವವರೆಗೆ ನೆಟ್‌ವರ್ಕ್ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯಲು ಸ್ವಘೋಷಣಾ ಪತ್ರಕ್ಕಾಗಿ ಸಹಕಾರ ಸಂಘಗಳಿಗೆ ಬೇಟಿ ನೀಡಬೇಕಾಗುತ್ತಿತ್ತು. ಈ ತೊಂದರೆಯನ್ನು ತಪ್ಪಿಸಲು ಈ ಕೆಳಕಂಡ ಬದಲಾವಣೆಯನ್ನು ಮಾಡಲಾಗಿದೆ.

ಅ. 2014–15ನೇ ಸಾಲಿನಲ್ಲಿ ಹೊಸದಾಗಿ ನೋಂದಾಯಿಸಿದವರಿಗೆ ಹೊಸ ಕಾರ್ಡುಗಳನ್ನು ಕೊಡಬೇಕು. ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಸದಸ್ಯರ ಎರಡು ಭಾವಚಿತ್ರಗಳನ್ನು ತಂದು ಕಛೇರಿ ಪ್ರತಿ ಮತ್ತು ಸದಸ್ಯರ ಪ್ರತಿಯ ಹಿಂಭಾಗದಲ್ಲಿ ಅರ್ಜಿ ಫಾರಂನಲ್ಲಿ ಕ್ರಮ ಸಂಖ್ಯೆ ಅನುಗುಣವಾಗಿ ಫೋಟೋಗಳನ್ನು ಅಂಟಿಸಿ ಭಾವಚಿತ್ರದ ಕೆಳಗೆ ಅವರ ಹೆಸರನ್ನು ಬರೆಯಬೇಕು.

ಆ. 2014–15ನೇ ಸಾಲಿನಲ್ಲಿ ಹೊಸದಾಗಿ ನೋಂದಾಯಿಸುವ ಸದಸ್ಯರ ಕಾರ್ಡ್ ಹಿಂಭಾಗದಲ್ಲಿರುವ ಸದಸ್ಯರ ಎಲ್ಲಾ ಫೋಟೋಗಳ ಮೇಲೆ ಸಹಕಾರ ಸಂಘದ ಮುದ್ರೆಯನ್ನು ಹಾಕಬೇಕು. (2013–14ರಲ್ಲಿ ಸದಸ್ಯರಾದವರ ಯಶಸ್ವಿನಿ ಕಾರ್ಡ್‌ನಲ್ಲಿ ಒಂದುವೇಳೆ ಸಹಕಾರ ಸಂಘದ ಮುದ್ರೆ ಇಲ್ಲದಿದ್ದಲ್ಲಿ ನವೀಕರಣ ಮಾಡುವ ಸಂದರ್ಭದಲ್ಲಾದರೂ ಮೂಲ ಕಾರ್ಡ್ ಮೇಲೆ ಸಹಕಾರ ಸಂಘದ ಮುದ್ರೆ ಹಾಕಬೇಕು)

20. 2014–15ನೇ ಸಾಲಿನಲ್ಲಿ ಹೊಸದಾಗಿ ನೋಂದಾವಣೆ/ನವೀಕರಣಗೊಂಡ/ ಸೇರ್ಪಡೆಯಾದ ಸದಸ್ಯರುಗಳಿಗೆ ಸಂಘವು ವಾರ್ಷಿಕ ವಂತಿಗೆ ಹಣ ಪಡೆದು ನೀಡಿರುವ ಸ್ವೀಕೃತಿ ರಶೀದಿಯನ್ನು ಮತ್ತು ನೋಂದಾವಣೆ ಫಾರಂನ ಸದಸ್ಯರಗಳ ಪ್ರತಿಯನ್ನು ಸದಸ್ಯರು 2014–15ನೇ ಸಾಲಿನ ಅಂತ್ಯದವರೆಗೆ ಸುರಕ್ಷಿತವಾಗಿ ಇಟ್ಟುಕೊಳ್ಳಬೇಕು ಮತ್ತು ಯೋಜನೆಯ ಸೌಲಭ್ಯವನ್ನು ಪಡೆಯುವ ಸಂದರ್ಭದಲ್ಲಿ ಐಡಿ ಕಾರ್ಡು ಮತ್ತು ರಶೀದಿಯನ್ನು ಟ್ರಸ್ಟಿನಿಂದ ಅಂಗೀಕರಿಸಲ್ಪಟ್ಟ **ಆಸ್ಪತ್ರೆಗಳಿಗೆ ಕಡ್ಡಾಯವಾಗಿ ಹಾಜರುಪಡಿಸಬೇಕು** ಎಂಬ ತಿಳಿವಳಿಕೆ ನೀಡತಕ್ಕದ್ದು.

21. ಈಗಾಗಲೇ ಸದಸ್ಯತ್ವ ಪಡೆದುಕೊಂಡಿದ್ದು 2014–15ನೇ ಸಾಲಿನಲ್ಲಿ ನವೀಕರಣದ ಸಮಯದಲ್ಲಿ ಈ ಹಿಂದೆ ನೊಂದಾಯಿಸಿಕೊಂಡಿರುವ ಸದಸ್ಯರನ್ನಲ್ಲದೆ, ಇನ್ನು ಹೆಚ್ಚು ಕುಟುಂಬದ ಸದಸ್ಯರನ್ನು ನವೀಕರಿಸಲು ಅವರಿಗೆ ನಿಗದಿತ ವಂತಿಗೆ ಪಾವತಿಸಿ ನವೀಕರಣದಲ್ಲಿ ಹೊಸ ಸೇರ್ಪಡೆಗಾಗಿ ಇರುವ ನವೀಕರಣದಲ್ಲಿ ಹೊಸ ಸೇರ್ಪಡೆ ಅರ್ಜಿ ಫಾರಂಗಳಲ್ಲಿ ಅವರ ಮಾಹಿತಿಯನ್ನು ತುಂಬಿ ಹಿಂಭಾಗದಲ್ಲಿ ಫೋಟೋ ಅಂಟಿಸಿ ಡಾಟಾ ಎಂಟ್ರಿಗೆ ಕಳುಹಿಸಬೇಕು ಮತ್ತು ನವೀಕರಣದಲ್ಲಿ ಹೊಸ ಸೇರ್ಪಡೆಯಾಗಿದ್ದರೆ ಅಂತಹ ಸಂದರ್ಭದಲ್ಲಿ ಅವರಿಗೆ ಈ ಹಿಂದೆ ನೀಡಿದ ಮೂಲ ಕಾರ್ಡಿನಲ್ಲಿಯೂ ಹೊಸದಾಗಿ ಸೇರ್ಪಡೆಯಾದವರ ಫೋಟೋ ಅಂಟಿಸಿ ಮೂಲಕಾರ್ಡುನ್ನು ಕಾರ್ಡುದಾರರಿಗೆ ಹಿಂತಿರುಗಿಸಬೇಕು.

22. 2008–09ರ ಸಾಲಿನಿಂದ ಸದಸ್ಯರುಗಳಿಗೆ ಯುನಿಕ್ ಐಡಿ ಸಂಖ್ಯೆಯನ್ನು ನೀಡಿ ಸದಸ್ಯರುಗಳ ಮಾಹಿತಿಯನ್ನು ಯಶಸ್ವಿನಿ ವೆಬ್‌ಸೈಟ್ www.yeshasvini.kar.nic.in/yeshsearch ನಲ್ಲಿ ಅಳವಡಿಸಲಾಗಿದೆ. 2010–11ನೇ ಸಾಲಿನಿಂದ ಹೊಸದಾಗಿ ನೋಂದಾವಣೆಯಾಗಿದ್ದ ಸದಸ್ಯರುಗಳು ಮತ್ತು ನವೀಕರಣಗೊಂಡಿದ್ದ ಸದಸ್ಯರುಗಳ ಮಾಹಿತಿಯನ್ನು ಕೂಡಾ ವೆಬ್‌ಸೈಟ್‌ನಲ್ಲಿ ಅಳವಡಿಸಲಾಗಿದೆ. ಆದ್ದರಿಂದ 2008–09 ಮತ್ತು ಅದಕ್ಕಿಂತ ಹಿಂದೆ ಯೋಜನೆಯ ಸದಸ್ಯರುಗಳಾಗಿದ್ದವರು ಮತ್ತು ನಂತರ ನೋಂದಾವಣೆ ನವೀಕರಿಸದೇ ಇದ್ದವರು, 2014–15ನೇ ಸಾಲಿನಲ್ಲಿ ಯೋಜನೆಯಡಿಯಲ್ಲಿ ಸೇರಲು ಬಯಸಿದಲ್ಲಿ, ಅಂತಹ ಸದಸ್ಯರುಗಳನ್ನು ನೋಂದಾಯಿಸಲು ಹೊಸ ನೋಂದಾವಣಿ ಫಾರಂಗಳನ್ನು ಉಪಯೋಗಿಸಬೇಕು.

23. ಪ್ರಾಥಮಿಕ ವ್ಯವಸಾಯ ಸೇವಾ ಸಹಕಾರ ಸಂಘಗಳು ತಮ್ಮಲ್ಲಿ ಸಾಲಪಡೆಯುವ ಸದಸ್ಯರು ಮತ್ತು ಅವರ ಕುಟುಂಬದ ಇತರೆ ಎಲ್ಲಾ ಸದಸ್ಯರನ್ನು ಯಶಸ್ವಿನಿ ಯೋಜನೆಯಡಿಯಲ್ಲಿ ಮನವೊಲಿಸಿ ಯಶಸ್ವಿನಿ ಯೋಜನೆಯಡಿಯಲ್ಲಿ ಸ್ವ–ಪ್ರೇರಣೆಯಿಂದ ಸದಸ್ಯರನ್ನಾಗಿ ಮಾಡುತ್ತಿವೆ. ಇದೇ ರೀತಿ ಉಳಿದ ಎಲ್ಲಾ ಜಿಲ್ಲಾ ಕೇಂದ್ರ ಬ್ಯಾಂಕುಗಳು ಮತ್ತು ಇತರೆ ಗ್ರಾಮೀಣ ಸಹಕಾರ ಸಂಘಗಳು ತಮ್ಮಲ್ಲಿ ಸಾಲಪಡೆಯುವ ಸದಸ್ಯರ ಮನವೊಲಿಸಿ ಸಾಲಗಾರರು ಮತ್ತು ಅವರ ಕುಟುಂಬದ ಇತರೆ ಎಲ್ಲಾ ಸದಸ್ಯರನ್ನು ಯಶಸ್ವಿನಿ ಯೋಜನೆಯಡಿಯಲ್ಲಿ ನೋಂದಾಯಿಸಲು ಕ್ರಮ ಕೈಗೊಳ್ಳಲು ತಿಳಿಸಿದೆ.

24. ಅದೇ ರೀತಿ ಪಿಕಾರ್ಡ್ ಬ್ಯಾಂಕುಗಳೂ ಕೂಡ ದೀರ್ಘಾವಧಿ ಸಾಲ ವಿತರಣೆ/ ವಸೂಲಾತಿ ಸಂದರ್ಭದಲ್ಲಿ ಯಶಸ್ವಿನಿ ವಾರ್ಷಿಕ ವಂತಿಗೆ ಹಣವನ್ನು ಸಾಲಗಾರರ ಕುಟುಂಬದ ಅರ್ಹ ವ್ಯಕ್ತಿಗಳನ್ನು ಮನವೊಲಿಸಿ ಸದಸ್ಯರಾನ್ನಾಗಿ ಮಾಡಬೇಕು.

25. ಹಾಲು ಉತ್ಪಾದಕರ ಸಹಕಾರ ಸಂಘಗಳು, ಸಹಕಾರಿ ಸಕ್ಕರೆ ಕಾರ್ಖಾನೆಗಳು, ಸಹಕಾರಿ ನೂಲಿನ ಗಿರಣಿಗಳು ಇತ್ಯಾದಿ ಸಹಕಾರಿ ಸಂಘಗಳು ಅವರ ಸದಸ್ಯರಿಗೆ ಹಣ ಪಾವತಿ ಮಾಡುವಾಗ ಅಂತಹ ಸದಸ್ಯರ ಕುಟುಂಬದ ಅರ್ಹ ವ್ಯಕ್ತಿಗಳನ್ನು ಮವವೊಲಿಸಿ ಸದಸ್ಯರನ್ನಾಗಿ ನೋಂದಾವಣೆ ಮಾಡಬೇಕು. ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಯಾವುದೇ ಸದಸ್ಯನು ಸರ್ಕಾರಿ ನೌಕರನಾಗಿ ಅಥವಾ ಖಾಸಗಿ ಕಂಪನಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಬೇರೆ ಯಾವುದೇ ಆರೋಗ್ಯ ವಿಮಾ ಯೋಜನೆಯ ಸೌಲಭ್ಯಕ್ಕೆ ಅರ್ಹನಾಗಿದ್ದಲ್ಲಿ, ಅಂತಹವರನ್ನು ಯಶಸ್ವಿನಿ ಯೋಜನೆಯ ಫಲಾನುಭವಿಯಾಗಿ ನೋಂದಾಯಿಸಬಾರದು. ಆದಾಗ್ಯೂ ಯಾವುದೇ ಕಾರಣಕ್ಕಾಗಿ ನೋಂದಾಯಿಸಿದರೂ ಅವರು ಯಶಸ್ವಿನಿ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗುವುದಿಲ್ಲ.

26. ರಾಜ್ಯದಲ್ಲಿ ಕೆಲವು ಹಾಲು ಉತ್ಪಾದಕರ ಒಕ್ಕೂಟಗಳು ಮತ್ತು ಕೆಲವು ಸಹಕಾರ ಸಂಘ/ಸಂಸ್ಥೆಗಳು ಅವುಗಳ ಸದಸ್ಯರ ಯಶಸ್ವಿನಿ ವಂತಿಗೆಯಲ್ಲಿ ಭಾಗಶಃ ಹಣವನ್ನು ಸಹಕಾರ ಸಂಘದ ಸ್ವಂತ ಬಂಡವಾಳದಿಂದ ಭರಿಸುತ್ತಿವೆ. ಈ ಪದ್ಧತಿಯನ್ನು ರಾಜ್ಯದ ಎಲ್ಲಾ ಸಹಕಾರ ಸಂಘ ಸಂಸ್ಥೆಗಳೂ ಕೂಡ ಅನುಸರಿಸುವಂತೆ ಪ್ರೋತ್ಸಾಹಿಸಲು ಸೂಚಿಸಲಾಗಿದೆ.

27. 2014–15ನೇ ಸಾಲಿನಲ್ಲಿ ಹೊಸದಾಗಿ/ನವೀಕರಣ ಮಾಡಿಕೊಳ್ಳುವ ಸದಸ್ಯರುಗಳು ಸುಳ್ಳು ಮಾಹಿತಿ ಮತ್ತು ಅಕ್ರಮವಾಗಿ ಸದಸ್ಯರ ಅಥವಾ ಸಹಕಾರ ಸಂಘಗಳ ತಪ್ಪಿನಿಂದಾಗಿ ಆಗಿದ್ದರೆ ಗೊತ್ತಿದ್ದು ಅಥವಾ ಗೊತ್ತಿಲ್ಲದೆಯೋ ನೋಂದಾವಣೆ ಹೊಂದಿದ್ದರೆ ಅಂತಹ ವ್ಯಕ್ತಿಗಳು ಯಶಸ್ವಿನಿ ಯೋಜನೆಯಡಿಯಲ್ಲಿ ಸೌಲಭ್ಯವನ್ನು ಪಡೆಯಲು ಅನರ್ಹರು ಹಾಗೂ ಪಾವತಿಸಿದ ವಂತಿಗೆ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೆಯೇ ಅಂತಹ ಫಲಾನುಭವಿಗಳ ಯಶಸ್ವಿನಿ ಯೋಜನೆಯ ಸದಸ್ಯತ್ವ ತಂತಾನೇ ರದ್ದುಗೊಳ್ಳುತ್ತದೆ, ಪ್ರತ್ಯೇಕ ರದ್ದತಿ ಆದೇಶದ ಅವಶ್ಯಕತೆ ಇರುವುದಿಲ್ಲ.

28. ಯಶಸ್ವಿನಿ ಯೋಜನೆಯಡಿಯಲ್ಲಿನ ಮಾಹಿತಿಯನ್ನೊಳಗೊಂಡ ಬ್ರೋಚರ್‌ಗಳನ್ನು ಸಹಕಾರ ಸಂಘಗಳು 2014–15ನೇ ಸಾಲಿಗೆ ಯೋಜನೆಯಡಿಯಲ್ಲಿ ಹೊಸದಾಗಿ ನೋಂದಾಯಿಸುವ/ ನವೀಕರಣಗೊಳ್ಳುವ ಫಲಾನುಭವಿಗಳ ಯಶಸ್ವಿನಿ ಕಾರ್ಡ್ ಹೊಂದಿರುವ ಪ್ರಧಾನ ಅರ್ಜಿದಾರರಿಗೆ ಮಾತ್ರ ಈ ಬ್ರೋಚರ್‌ಗಳನ್ನು ನೀಡಿ, ಬ್ರೋಚರ್‌ನ್ನು ಸ್ವೀಕರಿಸಿರುವ ಬಗ್ಗೆ ಸ್ವೀಕೃತಿಯನ್ನು ಪಡೆದು ಸಹಕಾರ ಸಂಘಗಳು ಇಟ್ಟುಕೊಂಡಿರಬೇಕು.

29. 2014–15ನೇ ಸಾಲಿನಲ್ಲಿ ಕೆಲವು ಸದಸ್ಯರು ಯಶಸ್ವಿನಿ ವಂತಿಗೆ ಹಣವನ್ನು ಸಹಕಾರ ಸಂಘಕ್ಕೆ ಪಾವತಿ ಮಾಡಿ, ಫೋಟೋ ಇತ್ಯಾದಿ ಅವಶ್ಯಕ ಮಾಹಿತಿಯನ್ನು ಒದಗಿಸದೆ ಇದ್ದರೆ, ಈ ಕಾರಣದಿಂದ ಸಹಕಾರ ಸಂಘದಲ್ಲಿ ಬಾಕಿ ಉಳಿದ ವಂತಿಗೆಯ ಮೊತ್ತವನ್ನು ಸಹಕಾರ ಸಂಘವು ಯಶಸ್ವಿನಿ ಟ್ರಸ್ಟಿಗೆ ನೀಡಿದ ದೇಣಿಗೆಯೆಂದು ಪರಿಗಣಿಸಿ, ಟ್ರಸ್ಟ್‌ನ ಖಾತೆಗೆ ಜಮಾಮಾಡತಕ್ಕದ್ದು.

30. 2014–15ನೇ ಸಾಲಿನ ಯಶಸ್ವಿನಿ ಯೋಜನೆಯ ಅವಧಿಯು ದಿನಾಂಕ: 01.06.2014ರಿಂದ ಪ್ರಾರಂಭವಾಗಿ 31.05.2015ಕ್ಕೆ ಮುಗಿಯುತ್ತದೆ. ಆದ ಕಾರಣ ಈ ಸುತ್ತೋಲೆ ಅನ್ವಯ **ಹೊಸದಾಗಿ ನೋಂದಾವಣೆಯಾಗುವ/ ಸೇರ್ಪಡೆಯಾಗುವ ಫಲಾನುಭವಿಗಳು ಯಶಸ್ವಿನಿ ಯೋಜನೆಯ ಸೌಲಭ್ಯವನ್ನು ದಿನಾಂಕ: 01.06.2014 ರಿಂದ ಜಾರಿಗೆ ಬರುವಂತೆ ಮಾತ್ರ ಪಡೆಯಲು ಅರ್ಹರಾಗುತ್ತಾರೆ**. ಆದ್ದರಿಂದ ಸಹಕಾರ ಸಂಘಗಳು ನೀಡುವ ವಂತಿಗೆ ಹಣ ಸ್ವೀಕೃತಿ ರಶೀದಿ/ಫಲಾನುಭವಿಗೆ ಈ ಮೇಲಿನ ಅಂಶದ ಬಗ್ಗೆ ಸ್ಪಷ್ಟವಾಗಿ ತಿಳುವಳಿಕೆಯನ್ನು ಕೂಡಬೇಕು.

ಇತರೆ ವಿಷಯಗಳ ಬಗ್ಗೆ ಈ ಮೊದಲು ನೀಡಲಾದ ಸುತ್ತೋಲೆಗಳಲ್ಲಿ ಮೇಲಿನ ನಿಯಮಗಳಿಗೆ ವಿರುದ್ಧವಲ್ಲದ ಮಾರ್ಗಸೂಚಿ ನಿಯಮಗಳನ್ನು ಪಾಲಿಸುವಂತೆ ಸೂಚಿಸಲಾಗಿದೆ. ಯಶಸ್ವಿನಿ ಯೋಜನೆಯ ಮಾರ್ಗಸೂಚಿಗಳ ಬಗ್ಗೆ ತಿಳುವಳಿಕೆ ನೀಡಲು ಆಯಾ ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರು ಅವರ ವ್ಯಾಪ್ತಿಯ ಇಲಾಖಾಧಿಕಾರಿಗಳ, ಜಿಲ್ಲಾಸಹಕಾರ ಬ್ಯಾಂಕ್‌ಗಳ, ಹಾಲುಉತ್ಪಾದಕರ ಒಕ್ಕೂಟಗಳ ಮತ್ತು ಇತರೆ ಪ್ರಮುಖ ಸಹಕಾರ ಸಂಘ / ಸಂಸ್ಥೆಗಳ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳ ಸಭೆಯನ್ನು ಪ್ರಾಂತ ಮಟ್ಟದಲ್ಲಿ ನಿರ್ವಹಿಸಲು ಸೂಚಿಸಿದೆ. ನಂತರ ದಿ: 15.03.2014ರೊಳಗೆ ಎಲ್ಲಾ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರುಗಳು ಅವರ ಜಿಲ್ಲೆಯ ಎಲ್ಲಾ ಗ್ರಾಮೀಣ ಸಹಕಾರ ಸಂಘಗಳ ಅಧ್ಯಕ್ಷರ ಮತ್ತು ಕಾರ್ಯದರ್ಶಿಯವರ, ಸ್ತ್ರೀಶಕ್ತಿ ಗುಂಪು/ ಸ್ವಸಹಾಯ ಗುಂಪು ಮತ್ತು ಸಂಬಂಧಿಸಿದ ಇಲಾಖೆಗಳ ಅಧಿಕಾರಿಗಳ ಸಭೆ ಕರೆದು ಕಾರ್ಯಾಗಾರ ಏರ್ಪಡಿಸಿ ಯೋಜನೆಯ ಮಾರ್ಗಸೂಚಿ ನಿಯಮಗಳು, ಇತಿಮಿತಿಗಳು ಮತ್ತು ಯೋಜನೆಯಿಂದ ಸೌಲಭ್ಯ ಪಡೆಯುವವರ ಬಗ್ಗೆ ಮಾಹಿತಿಯನ್ನು ನೀಡಿ, ತೆಗೆದುಕೊಂಡ ಕ್ರಮದ ಬಗ್ಗೆ ವರದಿಯನ್ನು ಸಹಕಾರ ಸಂಘಗಳ ನಿಬಂಧಕರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿದೆ.

**ಹೆಚ್.ಎಸ್ ನಾಗರಾಜಯ್ಯ**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ – I | ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫) | ನಂ. ೧೬೩ |
|---|---|---|
| Part – I | Bangalore, Wednesday, February 26, 2014 (Phalguna 7, Shaka Varsha 1935) | No. 163 |


## ಸಹಕಾರ ಸಚಿವಾಲಯ

**ವಿಷಯ** : 2014–15ನೇ ಸಾಲಿನಿಂದ **ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು** ಜಾರಿಗೊಳಿಸಲು ಹಾಗೂ ಸದಸ್ಯರುಗಳನ್ನು ನೋಂದಾಯಿಸಲು ಮಾರ್ಗ ಸೂಚಿಗಳನ್ನು ಹೊರಡಿಸುವ ಬಗ್ಗೆ.

**ಪ್ರಸ್ತಾವನೆ:**

ಯಶಸ್ವಿನಿ ಯೋಜನೆಯನ್ನು ನಗರ ಪ್ರದೇಶಗಳಲ್ಲಿರುವ ಸಹಕಾರ ಸಂಘಗಳಿಗೂ ವಿಸ್ತರಿಸಬೇಕೆಂದು, ನಗರ ಸಹಕಾರಿಗಳು, ಪತ್ರಕರ್ತರು, ಮನೆಕೆಲಸ ಮಾಡುವ ಅಸೋಷಿಯೇಷನ್‌ಗಳು, ಹೋಟೆಲ್ ಕಾರ್ಮಿಕರ ಸಂಘದವರು, ಅಲ್ಪಸಂಖ್ಯಾತರ ಆಯೋಗದ ಸದಸ್ಯರು, ಕುಕ್ಕುಟ ಸಹಕಾರ ಸಂಘಗಳ ಮಹಾಮಂಡಳದಿಂದ, ಕಟ್ಟಡ ನಿರ್ಮಾಣ ಬೋರ್ಡ್‌ನಿಂದಲೂ, ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಸಹಕಾರ ಸಂಘಗಳಿಂದಲೂ, ಮತ್ತು ನಗರವಾಸಿಗಳ ಅನೇಕ ವರ್ಗದ ಜನರಿಂದಲೂ ಮನವಿಗಳು ಬಂದ ಹಿನೆಲೆಯಲ್ಲಿ ಸರ್ಕಾರವು ನಗರಪ್ರದೇಶದ ಮಧ್ಯಮ ವರ್ಗದ ಜನರು,ಬಡತನ ರೇಖೆಯಿಂದ ಕೆಳಗೆ ಇರುವವರ, ನಗರ ಪ್ರದೇಶದಲ್ಲಿ ವಾಸಿಸುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಜನರು ತಮ್ಮ ಆರೋಗ್ಯ ರಕ್ಷಣೆಗಾಗಿ ಆಸ್ಪತ್ರೆ ಖರ್ಚು ಭರಿಸಲು ಪಡುವ ಬವಣೆಯನ್ನು ಮನಗಂಡು ಯಶಸ್ವಿನಿ ಯೋಜನೆಯನ್ನು ನಗರ ಸಹಕಾರ ಸಂಘಗಳ ಸದಸ್ಯರಿಗೂ ವಿಸ್ತರಿಸಲೂ ಕರ್ನಾಟಕ ಸರ್ಕಾರ ತೀರ್ಮಾನಿಸಿ ಸಚಿವ ಸಂಪುಟದ ಒಪ್ಪಿಗೆ ನೀಡಿದೆ. ಈ ಹಿನ್ನಲೆಯಲ್ಲಿ 2014–15ನೇ ಸಾಲಿನಿಂದ ನಗರ ಸಹಕಾರಿಗಳೂ ಮತ್ತು ಅವರ ಕುಟುಂಬವರ್ಗದವರಿಗೆ **"ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು"** ಜಾರಿಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ

**ಸರ್ಕಾರಿ ಆದೇಶ ಸಂಖ್ಯೆ: ಸಿಒ/119/ಸಿಎಲ್‌ಎಸ್/2014, ಬೆಂಗಳೂರು ದಿನಾಂಕ: 26.02.2014**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು 2014–15ನೇ ಸಾಲಿಗೆ ಜಾರಿಗೊಳಿಸಲು ಆದೇಶಿಸಿ, ಯಶಸ್ವಿನಿ ಸದಸ್ಯರನ್ನು ನೊಂದಾಯಿಸಲು ಈ ಕೆಳಕಂಡ ಮಾರ್ಗಸೂಚಿಗಳನ್ನು ಹೊರಡಿಸಿದೆ.

1. ಯಶಸ್ವಿನಿ ನಗರ ಸಹಕಾರಿ ಆರೋಗ್ಯ ರಕ್ಷಣಾ ಯೋಜನೆಯನ್ನು 2014–15ನೇ ಸಾಲಿನಿಂದ ರಾಜ್ಯದ ನಗರ ಸಹಕಾರಿಗಳು ಮತ್ತು ಅವರ ಕುಟುಂಬ ವರ್ಗದವರಿಗೆ ಉತ್ತಮ ಗುಣಮಟ್ಟದ ಆರೋಗ್ಯ ರಕ್ಷಣೆಯನ್ನು ಒದಗಿಸಲು ಕರ್ನಾಟಕ ಸರ್ಕಾರ ಜಾರಿಗೊಳಿಸುತ್ತಿರುವ ಒಂದು ಸ್ವಯಂ–ನಿಧಿ ಶಸ್ತ್ರ ಚಿಕಿತ್ಸಾ ಯೋಜನೆಯಾಗಿದೆ. ಒಬ್ಬ ವ್ಯಕ್ತಿ ಕಾರ್ಯನಿರ್ವಹಿಸುತ್ತಿರುವ ನಗರ ಪ್ರದೇಶದ ಯಾವುದೇ ತರಹದ ನಗರ ಸಹಕಾರ ಸಂಘಗಳಲ್ಲಿ (ಸ್ಥಗಿತಗೊಂಡಿರುವ, ಅವಸಾನಗೊಂಡ (ಲಿಕ್ವಿಡೇಟಡ್) ಮತ್ತು ನೌಕರರ ಸಹಕಾರ ಸಂಘಗಳ ಸದಸ್ಯರನ್ನು ಹೊರತುಪಡಿಸಿ)

ಸದಸ್ಯರಾಗಿ 3 ತಿಂಗಳು ಕಳೆದಿದ್ದರೆ ಅಂತಹ ಸಹಕಾರ ಸಂಘದ ಸದಸ್ಯರು ತಾವು ಮತ್ತು ತಮ್ಮ ಕುಟುಂಬವರ್ಗದವರನ್ನು ಈ ಯೋಜನೆಯಡಿ ಸದಸ್ಯರನ್ನಾಗಿ ನೋಂದಾಯಿಸಿ ಕೊಳ್ಳಬಹುದು.

2. ಯಶಸ್ವಿನಿ ಯೋಜನೆಯ ಸೌಲಭ್ಯ ಪಡೆಯಲು ಒಬ್ಬ ವ್ಯಕ್ತಿಯು ಸಹಕಾರ ಸಂಘದ ಸದಸ್ಯನಾಗಿರಬೇಕು. ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಅಡಿ ಅಥವಾ ಕರ್ನಾಟಕ ಸೌಹಾರ್ದ ಸಹಕಾರ ಅಧಿನಿಯಮ 1997ರ ಅಡಿ ಅಥವಾ ಬಹು ರಾಜ್ಯ ಸಹಕಾರ ಸಂಘಗಳ ಅಧಿನಿಯಮ 2007ರ ಅಡಿ ನೋಂದಾಯಿಸಿದ ಹಾಗೂ ಮೇಲೆ ಸೂಚಿಸಿರುವ ಯಾವುದೇ ನಗರ ಸಹಕಾರ ಸಂಘದಲ್ಲಿ ಸದಸ್ಯತ್ವ ಪಡೆದು 01.06.2014ಕ್ಕೆ ಕನಿಷ್ಠ 3 ತಿಂಗಳಾಗಿರಬೇಕು.

3. ಆದಾಗ್ಯೂ ನಗರ/ ಪಟ್ಟಣದ ಜೊತೆಗೆ ಮಹಾನಗರ ಪಾಲಿಕೆ ವ್ಯಾಪ್ತಿಗೆ ಒಳಪಟ್ಟಿರುವ ಪ್ರದೇಶದಲ್ಲಿ ಜಿಲ್ಲಾ ಕೇಂದ್ರ ಬ್ಯಾಂಕುಗಳೊಡನೆ ವ್ಯವಾಹಾರ ನೆಡೆಸುವ ಅಥವಾ ಜಿಲ್ಲಾ ಕೇಂದ್ರ ಬ್ಯಾಂಗಳಿಂದಲೇ ಸ್ಥಾಪಿಸಲ್ಪಟ್ಟ ನಗರ ಪ್ರದೇಶದಲ್ಲಿರುವ ಸ್ವಸಹಾಯ ಗುಂಪುಗಳು ಮತ್ತು ಅವರ ಕುಟುಂದವರೂ ಯಶಸ್ವಿನಿ ನಗರ ಸಹಕಾರಿ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರಾಗಬಹುದು, ಆದರೆ ಇಂತಹ ಸ್ವಸಹಾಯ ಗುಂಪುಗಳನ್ನು ಸ್ಥಾಪನೆ ಮಾಡಿ ಕನಿಷ್ಟ 3 ತಿಂಗಳು ಗತಿಸಿರಬೇಕು.

4. ಅವಿಭಕ್ತ ಕುಟುಂಬದ ಯಾವುದೇ ಒಬ್ಬ ಸದಸ್ಯನು/ಸದಸ್ಯಳು ಮೇಲೆ ತಿಳಿಸಿರುವ ಅರ್ಹ ಸಹಕಾರ ಸಂಘದ ಸದಸ್ಯನಾಗಿ/ಳಾಗಿ ಯಶಸ್ವಿನಿ ವರ್ಷದ ಮೊದಲ ದಿನ **ಅಂದರೆ 01.06.2014ಕ್ಕೆ** 3 ತಿಂಗಳಾಗಿದ್ದಲ್ಲಿ, ಆ ಕುಟುಂಬದ ಪ್ರತಿಯೊಬ್ಬ ಸದಸ್ಯನೂ ನಿಗದಿತ ಅವಧಿಯಲ್ಲಿ ವಾರ್ಷಿಕ ವಂತಿಗೆ ಸಲ್ಲಿಸುವ ಮೂಲಕ ಯಶಸ್ವಿನಿ ಯೋಜನೆಯ ಸೌಲಭ್ಯ ಪಡೆಯಬಹುದು. ಅವಿಭಕ್ತ ಕುಟುಂಬ ಅಂದರೆ ತಂದೆ, ತಾಯಿ, ಗಂಡು/ ಮದುವೆಯಾಗದ ಹೆಣ್ಣು ಮಕ್ಕಳು, ಸೊಸೆ, ಮೊಮ್ಮಕ್ಕಳೂ ಸೇರಿ ಎಂದು ಅರ್ಥೈಯಿಸುವುದು.

5. ಮದುವೆಯಾಗಿರುವ ಹೆಣ್ಣು ಮಗಳು ಹಾಗೂ ಅವಳ ಮಕ್ಕಳು ತಂದೆ/ತಾಯಿ/ಅಣ್ಣ/ತಮ್ಮ ಇವರ ಕುಟುಂಬದಲ್ಲಿಯೇ ಅಂದರೆ ಪ್ರಧಾನ ಅರ್ಜಿದಾರರ ಕುಟುಂಬದಲ್ಲಿ ವಾಸವಾಗಿದ್ದರೆ, ಅವರ ಪಾಲಿನ ವಂತಿಗೆ ಹಣ ಪಾವತಿಸಿದರೆ ನೋಂದಾವಣೆಗೆ ಹಾಗೂ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ. ಆದಾಗ್ಯೂ, 2014–15ನೇ ಸಾಲಿನ ಯೋಜನೆಯ ಅವಧಿಯಲ್ಲಿ ಮದುವೆಯಾದ ಹೆಣ್ಣು ಮಗಳು ತಂದೆ/ತಾಯಿ/ಅಣ್ಣ/ತಮ್ಮ ಇವರ ಜೊತೆ ವಾಸವಾಗಿರದೆ ಸಂಘದ ಕಾರ್ಯವ್ಯಾಪ್ತಿಯ ಹೊರಗೆ ವಾಸವಿದ್ದರೆ ಅಂಥಹ ಸಂದರ್ಭದಲ್ಲಿ ಮೇಲೆ ವಿವರಿಸಿದಂತೆ ಅವಿಭಕ್ತ ಕುಟುಂಬದ ಸದಸ್ಯೆಯಾಗಿ ಯೋಜನೆಯ ಸೌಲಭ್ಯವನ್ನು ಪಡೆಯಲು ಅರ್ಹರಾಗುವುದಿಲ್ಲ. ಆದರೆ, ಅವಳೇ ಸಹಕಾರ ಸಂಘದ ಸದಸ್ಯೆಯಾಗಿ ಯಶಸ್ವಿನಿ ವರ್ಷದ ಮೊದಲ ದಿನಕ್ಕೆ 3 ತಿಂಗಳು ಕಳೆದಿದ್ದಲ್ಲಿ, ಈ ನಿರ್ಬಂಧ ಅಂಥವಳಿಗೆ ಅನ್ವಯಿಸುವುದಿಲ್ಲ. ಮದುವೆಯಾಗಿ ಗಂಡನ ಮನೆಯಲ್ಲಿ ವಾಸ ಮಾಡುತ್ತಿರುವ ಹಾಗೂ ಪ್ರಧಾನ ಅರ್ಜಿದಾರರ ಜೊತೆಯಲ್ಲಿ ವಾಸ ಮಾಡದೇ ಇರುವ ಹೆಣ್ಣು ಮಕ್ಕಳಿಂದ ಸಹಕಾರ ಸಂಘಗಳು ವಂತಿಗೆಯನ್ನು ಸ್ವೀಕರಿಸತಕ್ಕದಲ್ಲ.

6. 2014–15ನೇ ಸಾಲಿನಲ್ಲಿ ಮದುವೆಯಾಗದ ಹೆಣ್ಣುಮಕ್ಕಳಿಗೆ ಪ್ರಧಾನ ಅರ್ಜಿದಾರರು ವಂತಿಗೆ ಪಾವತಿಸಿದ್ದು, ಆನಂತರ ಮದುವೆಯಾಗಿದ್ದಲ್ಲಿ ಅಂತಹ ಮದುವೆಯಾದ ಹೆಣ್ಣು ಮಕ್ಕಳಿಗೆ ಪ್ರಸಕ್ತ ಸಾಲಿನಲ್ಲಿ 31.05.2015ರವರೆಗೆ ಯಶಸ್ವಿನಿ ಯೋಜನೆಯಡಿಯಲ್ಲಿ ಸೌಲಭ್ಯವನ್ನು ಪಡೆಯಬಹುದಾಗಿದೆ.

7. **2014–15ನೇ ಸಾಲಿಗೆ ಯಶಸ್ವಿನಿ ವಾರ್ಷಿಕ ವಂತಿಗೆಯನ್ನು ಪ್ರತಿಯೊಬ್ಬರಿಗೆ ರೂ.1010/–ಕ್ಕೆ ನಿಗದಿಗೊಳಿಸಲಾಗಿದೆ.** ಈ ಯೋಜನೆಯ ಪ್ರಯೋಜನ ಪಡೆಯಲು ಉದ್ದೇಶಿಸುವ ಪ್ರತಿಯೊಬ್ಬರು ರೂ.1,010/– ರಂತೆ ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಉದ್ದೇಶಿಸಿದ ಪ್ರತಿಯೊಬ್ಬ ಸದಸ್ಯರಿಗೆ ಕಡ್ಡಾಯವಾಗಿ ಪಾವತಿ ಮಾಡಬೇಕು. ಈ ಪೈಕಿ ರೂ.10/– ಅನ್ನು ಸಂಘದ ಸಾದಿಲ್ವಾರು ವೆಚ್ಚಕ್ಕೆ ಮತ್ತು ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸಲು ಶ್ರಮಿಸಿದವರಿಗೆ ಪ್ರೋತ್ಸಾಹಧನವಾಗಿ ಸಹಕಾರ ಸಂಘ/ಸಂಸ್ಥೆಯು ಇಟ್ಟುಕೊಂಡು, ಉಳಿದ ರೂ.1,000/–ಗಳನ್ನು ಹಣ ಸ್ವೀಕರಿಸಿದ 15 ದಿನಗಳೊಳಗಾಗಿ ಸಂಬಂಧಿಸಿದ ಜಿಲ್ಲಾ ಸಹಕಾರಿ ಬ್ಯಾಂಕುಗಳಲ್ಲಿ ಯಶಸ್ವಿನಿ ಟ್ರಸ್ಟ್ ಹೊಂದಿರುವ ನಗರ ಯಶಸ್ವಿನಿ ಖಾತೆಗೆ ಜಮಾ ಮಾಡಬೇಕು/ವರ್ಗಾಯಿಸಬೇಕು. ವಿಳಂಬವಾದಲ್ಲಿ ಆ ಹಣವನ್ನು ಇಟ್ಟುಕೊಂಡ ಸಹಕಾರಿ ಸಂಘ/ಸಂಸ್ಥೆಯವರು ಬ್ಯಾಂಕಿನ ನಿಯಮಗಳ ಪ್ರಕಾರ ವಿಳಂಬದ ಅವಧಿಗೆ ಬಡ್ಡಿ ಪಾವತಿ ಮಾಡಲು ಬದ್ಧರಾಗುತ್ತಾರೆ.

8. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವರ್ಗದ ಸಹಕಾರ ಸಂಘಗಳ ಸದಸ್ಯರು ಮತ್ತು ಅವರ ಕುಟುಂಬ ವರ್ಗದವರು ರೂ.810/–ನ್ನು ವಂತಿಗೆಯಾಗಿ ಪಾವತಿಸಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರಾಗಬಹುದು. ಅವರ ಉಳಿದ ವಂತಿಗೆ ರೂ.200/– ಗಳನ್ನು ಸರ್ಕಾರವು ಎಸ್.ಸಿ.ಪಿ /ಟಿ.ಎಸ್.ಪಿ ಫಂಡ್‌ನಿಂದ ಭರಿಸಲಿದೆ.

9. 2014–15ನೇ ಸಾಲಿಗೆ ಯಾವುದೇ ಒಂದು ಕುಟುಂಬದಲ್ಲಿ ಐವರು ಅಥವಾ ಅದಕ್ಕಿಂತ ಹೆಚ್ಚಿಗೆ ಕುಟುಂಬ ಸದಸ್ಯರನ್ನು ಯಶಸ್ವಿನಿ ಸದಸ್ಯರನ್ನಾಗಿ ನೋಂದಾಯಿಸಿದಲ್ಲಿ ಅವರು ಪಾವತಿಸಬೇಕಾದ ವಂತಿಗೆ ಹಣದಲ್ಲಿ ಅಂದರೆ ಪ್ರತಿ ಸದಸ್ಯರಿಗೆ ರೂ.1,000/–ರಲ್ಲಿ ಶೇ.15 ರಂತೆ ರಿಯಾಯಿತಿ ಪಡೆಯಲು ಅರ್ಹರಿರುತ್ತಾರೆ.

10. ಯಶಸ್ವಿನಿ ಸದಸ್ಯರಾಗಲು ನಿಗದಿಗೊಳಿಸಿದ ಗರಿಷ್ಠ ವಯೋಮಿತಿ 75 ವರ್ಷ ಮುಂದುವರೆದಿರುತ್ತದೆ. ಅಂದರೆ ಯಾವುದೇ ಒಬ್ಬ ವ್ಯಕ್ತಿಯು ಯೋಜನೆಯ ಸೌಲಭ್ಯವನ್ನು ಪಡೆಯಲು ಯಶಸ್ವಿನಿ ವರ್ಷ ಪ್ರಾರಂಭ ಆಗುವ ದಿನ ಅಂದರೆ 01.06.2014ಕ್ಕೆ 75 ವರ್ಷ ಪೂರ್ಣಗೊಳಿಸಿದ್ದಲ್ಲಿ ಯೋಜನೆಯ ಸೌಲಭ್ಯವನ್ನು ಪಡೆಯಲು ಅರ್ಹನಾಗುವುದಿಲ್ಲ.

11. ನವಜಾತ ಶಿಶುವಿನ ತಾಯಿಯ ಹೆಸರು ಯಶಸ್ವಿನಿ ಕಾರ್ಡ್‌ನಲ್ಲಿದ್ದರೆ 30 ದಿನಗಳವರೆಗೆ ತಾಯಿ ಹೆಸರು ಇರುವ ಕಾರ್ಡಿನ ಆಧಾರದ ಮೇಲೆ ಈ ಯೋಜನೆಯಡಿಯಲ್ಲಿ ಬರುವ ಸೌಲಭ್ಯವನ್ನು ಪಡೆಯಬಹುದು. 30 ದಿನಗಳ ನಂತರದಲ್ಲಿ ಮಗುವಿನ ಹೆಸರಿನೊಂದಿಗೆ ಆ ವರ್ಷದಲ್ಲಿ ಯಾವ ಸಂದರ್ಭದಲ್ಲಿಯೂ ನೋಂದಾಯಿಸಿಕೊಂಡು ಯೋಜನೆಯ ಸವಲತ್ತು ಪಡೆಯಬಹುದು.

12. ನಗರ ಯಶಸ್ವಿನಿ ಯೋಜನೆಯು ಒಂದು ಸ್ವಂತ ಬಂಡವಾಳ ಯೋಜನೆಯಾಗಿದ್ದು, ಯೋಜನೆಯಡಿ ಸದಸ್ಯರಿಂದ ಸಂಗ್ರಹಿಸಿದ ವಂತಿಗೆಯಿಂದಲೇ ಶಸ್ತ್ರಚಿಕಿತ್ಸಾ ವೆಚ್ಚವನ್ನು ಪಾವತಿಸಬೇಕಾದ್ದರಿಂದ. ಯೋಜನೆಯ ಸಬಲತೆಯ ದೃಷ್ಟಿಯಿಂದ ಹೆಚ್ಚಿನ ಪ್ರಮಾಣದಲ್ಲಿ ಸದಸ್ಯರುಗಳನ್ನು ನೋಂದಾಯಿಸಲು ಪ್ರಯತ್ನಿಸುವುದು ಅತೀ ಅವಶ್ಯವಾಗಿದೆ. ನಗರ ಪ್ರದೇಶದ ಸಹಕಾರ ಸಂಘಗಳ ಸದಸ್ಯರ ಸಂಖ್ಯೆಯು

ಅಂದಾಜು 75.65 ಲಕ್ಷಕ್ಕಿಂತ ಹೆಚ್ಚು ಇರುವುದನ್ನು ಹಾಗೂ ನಗರ ಪ್ರದೇಶದ ಸ್ತ್ರೀ ಶಕ್ತಿ ಗುಂಪು/ ಸ್ವಸಹಾಯ ಗುಂಪುಗಳ ಸದಸ್ಯರ ಸಂಖ್ಯೆಯನ್ನು ಗಮನಿಸಿದಾಗ ಯೋಜನೆಗೆ ಒಳಪಡಿಸಬಹುದಾದವರ ಸಂಖ್ಯೆ ಹೆಚ್ಚಿಗೆ ಇರುತ್ತದೆ. ಆದ್ದರಿಂದ, 2014–15ನೇ ಸಾಲಿನಲ್ಲಿ ಕನಿಷ್ಠ 30.00ಲಕ್ಷ ಸದಸ್ಯರುಗಳನ್ನು ನೋಂದಾಯಿಸುವ ಗುರಿ ನಿಗದಿಪಡಿಸಲಾಗಿದೆ. ಪ್ರತಿ ಜಿಲ್ಲೆಯ ಪರಿಸ್ಥಿತಿಯನ್ನು ಗಮನದಲ್ಲಿಟ್ಟು ಸಹಕಾರ ಸಂಘಗಳ ನಿಬಂಧಕರು ಪ್ರತಿ ಜಿಲ್ಲೆಗೆ ಪ್ರತ್ಯೇಕ ಗುರಿ ನಿಗದಿಗೊಳಿಸುವಂತೆ ಸೂಚಿಸಲಾಗಿದೆ.

13. **2014–15ನೇ ಸಾಲಿಗೆ ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ ಕಾರ್ಯಕ್ರಮವನ್ನು ಈ ಕೆಳಗಿನಂತೆ ನಿಗದಿಗೊಳಿಸಲಾಗಿದೆ.**

ಅ) ನಗರ ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ ಪ್ರಕ್ರಿಯೆಯನ್ನು **ಪ್ರಾರಂಭ ಮಾಡುವ ದಿನಾಂಕ: 15–3–2014.**

ಆ) ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ **ಕೊನೆಯ ದಿನಾಂಕ: 31.05.2014.**

14. ಮೇಲೆ ನಮೂದಿಸಿದ ದಿನಾಂಕಗಳ ನಂತರದ ಅವಧಿ ಮುಂದುವರಿಯದಿದ್ದಲ್ಲಿ, ನಗರ ಯಶಸ್ವಿನಿ ಸದಸ್ಯರುಗಳ ನೋಂದಾಯಿಸುವಿಕೆಗೆ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಒಂದು ವೇಳೆ ನಿಗದಿತ ದಿನಾಂಕಗಳ ನಂತರ ನೋಂದಾಯಿಸಿದಲ್ಲಿ ಅಂಥವರು ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗುವುದಿಲ್ಲ.

15. 2014–15ನೇ ಸಾಲಿನಲ್ಲಿ ನಗರ ಯಶಸ್ವಿನಿ ಸದಸ್ಯರುಗಳನ್ನು ಹೊಸದಾಗಿ ನೋಂದಾಯಿಸಲು 2014–15ನೇ ಸಾಲಿನಲ್ಲಿ ಸರಬರಾಜು ಮಾಡಿರುವ ಹೊಸ ನೋಂದಾವಣಿ ಫಾರಂಗಳನ್ನು ಮಾತ್ರ ಎಲ್ಲರಿಗೂ ಉಪಯೋಗಿಸಬೇಕು ಮತ್ತು ಗುರುತಿನ ಚೀಟಿ ಒದಗಿಸಬೇಕು. ಸಹಕಾರ ಸಂಘಗಳ ಉಪನಿಬಂಧಕರುಗಳು ನೋಂದಾವಣೆಗೆ ಬೇಕಾದ ಅವಶ್ಯಕ ಸಂಖ್ಯೆಯ ಫಾರಂಗಳನ್ನು ಯಶಸ್ವಿನಿ ಟ್ರಸ್ಟ್ ಕಛೇರಿಯಿಂದ ಪಡೆದು ಅವರ ವ್ಯಾಪ್ತಿಯ ಸಹಕಾರ ಸಂಘಗಳ ಕಾರ್ಯದರ್ಶಿಗಳಿಗೆ ಫಾರಂ ಪುಸ್ತಕಗಳನ್ನು ಹಂತ–ಹಂತವಾಗಿ ಪೂರೈಸಿ ಸ್ವೀಕೃತಿ ಪಡೆಯಬೇಕು. ಒಮ್ಮೆ ಪೂರೈಸಿದ ಫಾರಂಗಳಲ್ಲಿ ಸಹಕಾರ ಸಂಘದವರು ಮಾಹಿತಿಯನ್ನು ಪೂರ್ತಿಯಾಗಿ ನಮೂದಿಸಿ ವಂತಿಗೆ ಹಣವನ್ನು ಬ್ಯಾಂಕಿಗೆ ಪಾವತಿ ಮಾಡಿದ ನಂತರವೇ ಮತ್ತೆ ಫಾರಂಗಳನ್ನು ಒದಗಿಸಬೇಕು. ಸಹಕಾರ ಸಂಘಕ್ಕೆ ಫಾರಂ ಪೂರೈಸುವಾಗ ಪುಸ್ತಕದ ಸಂಖ್ಯೆ ಮತ್ತು ಯುನಿಕ್ ಐ.ಡಿ ಸಂಖ್ಯೆಯನ್ನು ನಮೂದಿಸಿ ಕಾರ್ಯದರ್ಶಿಯಿಂದ ಸ್ವೀಕೃತಿ ಪಡೆದುಕೊಳ್ಳಬೇಕು. ಈ ಬಗ್ಗೆ ಪರಿಶೀಲನೆಗಾಗಿ ಪ್ರತ್ಯೇಕ ಪುಸ್ತಕದಲ್ಲಿ ಬರೆದಿಟ್ಟಿರಬೇಕು. ಅರ್ಹ ಸಹಕಾರ ಸಂಘಗಳು ಸದಸ್ಯರುಗಳಿಂದ ನಿಗದಿತ ವಾರ್ಷಿಕ ವಂತಿಗೆ ಹಣ ಪಡೆದು ಸಂಘದ ಹಣ ಸ್ವೀಕೃತಿ ರಶೀದಿಯನ್ನು ಕೊಡಬೇಕು. ರಶೀತಿಯಲ್ಲಿ ನಗರ ಯಶಸ್ವಿನಿ ಯೋಜನೆಯ ವಾಷಿಕ ವಂತಿಗೆ ಎಂದು ನಮೂದಿಸಬೇಕು. ವಿಮೆ ಎಂಬ ಶಬ್ದ ಬಳಸಬಾರದು. ಫಾರಂನಲ್ಲಿ ಸದಸ್ಯರನ್ನು ನೋಂದಾಯಿಸಿದ **ತಿಂಗಳು, ವರ್ಷ ಮತ್ತು ದಿನಾಂಕವನ್ನು ತಪ್ಪದೆ ನಮೂದಿಸಬೇಕು.** ನೋಂದಾವಣೆ ಫಾರಂನ ಕೆಳಭಾಗವನ್ನು ಸದಸ್ಯರಿಗೆ ಕೊಡಬೇಕು. ಮೇಲ್ಭಾಗವನ್ನು ಡಾಟಾ ಎಂಟ್ರಿ ಮಾಡಲು ಸಂಬಂಧಿಸಿದ ಜಿಲ್ಲೆಯ ಸಹಕಾರ ಸಂಘಗಳ ಉಪನಿಬಂಧಕರಿಗೆ ಪ್ರತಿ ತಿಂಗಳ ಕೊನೆಯಲ್ಲಿ ಸಂಗ್ರಹಿಸಿದ ವಂತಿಗೆಯ ಹಣವನ್ನು ಬ್ಯಾಂಕಿಗೆ ಜಮೆ ಮಾಡಿ ರಶೀದಿಯೊಂದಿಗೆ ಕಳಿಸಬೇಕು ಮತ್ತು ಆಗಿಂದಾಗ್ಗೆ ಡಾಟಾ ಎಂಟ್ರಿ ಮಾಡಲು ಅನುಕೂಲವಾಗುವಂತೆ ಪ್ರತಿತಿಂಗಳ ಕೊನೆಯಲ್ಲಿ ಹೊಸ ನೋಂದಾವಣೆ ಅರ್ಜಿಯ ವಿವರಗಳನ್ನು ಅಂದರೆ ಹೊಸ ಅರ್ಜಿಗಳಲ್ಲಿ ಸದಸ್ಯರುಗಳ ಫೋಟೋ ಅಂಟಿಸಿ, ಎಲ್ಲಾ ವಿವರಗಳೊಂದಿಗೆ ಹೊಸದಾಗಿ ನೋಂದಾಯಿಸಿದ ಸದಸ್ಯರುಗಳ ತಖ್ತೆಯೊಂದಿಗೆ ಸಹಕಾರ ಸಂಘಗಳ ಉಪನಿಬಂಧಕರ ಕಛೇರಿಗೆ ನೀಡಿ ಸ್ವೀಕೃತಿ ಪಡೆಯಬೇಕು. 2014–15ನೇ ಸಾಲಿನಲ್ಲಿ ಹೊಸದಾಗಿ ನೋಂದಾಯಿಸುವವರ ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಸದಸ್ಯರ ಎರಡು ಭಾವಚಿತ್ರಗಳನ್ನು ತಂದು ಕಛೇರಿ ಪ್ರತಿ ಮತ್ತು ಸದಸ್ಯರ ಪ್ರತಿಯ ಹಿಂಭಾಗದಲ್ಲಿ ಅರ್ಜಿ ಫಾರಂನಲ್ಲಿ ಕ್ರಮ ಸಂಖ್ಯೆ ಅನುಗುಣವಾಗಿ ಫೋಟೋಗಳನ್ನು ಅಂಟಿಸಿ ಭಾವಚಿತ್ರದ ಕೆಳಗೆ ಅವರ ಹೆಸರನ್ನು ಬರೆಯಬೇಕು.

16. ಎಲ್ಲಾ ಜಿಲ್ಲೆಗಳ ಸಹಕಾರ ಸಂಘಗಳ ಉಪನಿಬಂಧಕರುಗಳು ಆಯಾ ಜಿಲ್ಲಾ ಕೇಂದ್ರ ಬ್ಯಾಂಕುಗಳ ಜಿಲ್ಲಾ ಕೇಂದ್ರಗಳಲ್ಲಿರುವ, ಮತ್ತು ತಾಲ್ಲೂಕು ಕೇಂದ್ರಗಳಲ್ಲಿರುವ ಬ್ರ್ಯಾಂಚ್ ಗಳಲ್ಲಿ ನಗರ ಯಶಸ್ವಿನಿ ಯೋಜನೆಗಾಗಿಯೇ ಪ್ರತ್ಯೇಕ ಖಾತೆ ತೆರೆಯುವ ವ್ಯವಸ್ಥೆ ಮಾಡಿ ನಗರ ಸಹಕಾರ ಸಂಘಗಳು ಸಂಗ್ರಹಿಸುವ ಸದಸ್ಯರ ವಂತಿಗೆ ಹಣವನ್ನು ಈ ಖಾತೆಗೆ ಜಮೆ ಮಾಡಿ ಜಮೆಯಾದ ಒಂದು ವಾರದೊಳಗೆ ಅಪೆಕ್ಸ್ ಬ್ಯಾಂಕಿನಲ್ಲಿರುವ ಪ್ರತ್ಯೇಕ ನಗರ ಯಶಸ್ವಿನಿ ಖಾತೆಗೆ ವರ್ಗಾಯಿಸಬೇಕು.

17. 2014–15ನೇ ಸಾಲಿನಲ್ಲಿ ಹೊಸದಾಗಿ ನೋಂದಾಯಿಸಿದ ಸದಸ್ಯರುಗಳಿಗೆ ಆಯ ನಗರ ಸಹಕಾರಿ ಸಂಘಗಳು ವಾರ್ಷಿಕ ವಂತಿಗೆ ಹಣ ಪಡೆದು ನೀಡಿರುವ ಸ್ವೀಕೃತಿ ರಶೀದಿಯನ್ನು ಮತ್ತು ಹೊಸ ನೋಂದಾವಣೆ ಫಾರಂನ ಸದಸ್ಯರಗಳ ಪ್ರತಿಯನ್ನು ಸದಸ್ಯರು 2014–15ನೇ ಸಾಲಿನ ಅಂತ್ಯದವರೆಗೆ ಸುರಕ್ಷಿತವಾಗಿ ಇಟ್ಟುಕೊಳ್ಳಬೇಕು ಮತ್ತು ಯೋಜನೆಯ ಸೌಲಭ್ಯವನ್ನು ಪಡೆಯುವ ಸಂದರ್ಭದಲ್ಲಿ ರಶೀದಿಯನ್ನು ಟ್ರಸ್ಟಿನಿಂದ ಅಂಗೀಕರಿಸಲ್ಪಟ್ಟ **ಆಸ್ಪತ್ರೆಗಳಿಗೆ ಆಸ್ಪತ್ರೆಗಳಿಗೆ ದಾಖಾಲಾಗುವ ಸಂದರ್ಭದಲ್ಲಿ ಕಡ್ಡಾಯವಾಗಿ ಹಾಜರುಪಡಿಸಬೇಕು** ಎಂಬ ತಿಳಿವಳಿಕೆ ನೀಡತಕ್ಕದ್ದು.

18. ನಗರ ಸಹಕಾರ ಸಂಘಗಳು ಯಶಸ್ವಿನಿ ಯೋಜನೆಯಡಿಯಲ್ಲಿ ಮನವೊಲಿಸಿ ಸ್ವ–ಪ್ರೇರಣೆಯಿಂದ ನಗರ ಯಶಸ್ವಿನಿ ಯೋಜನೆಯಡಿಯಲ್ಲಿ ಸದಸ್ಯರನ್ನಾಗಿ ಮಾಡಲು ಕ್ರಮ ಕೈಗೊಳ್ಳಬೇಕು. ಯಾವುದೇ ರೀತಿಯ ಕಡ್ಡಾಯ ಅಥವಾ ಒತ್ತಡ ಹೇರಬಾರದು. ನಗರ ಸಹಕಾರಿ ಸಂಘಗಳು ಅವರ ಸದಸ್ಯರಿಗೆ ಸಾಲದ, ಮತ್ತಿತರೇ ಹಣ ಪಾವತಿ ಮಾಡುವಾಗ ಅಂತಹ ಸದಸ್ಯರ ಕುಟುಂಬದ ಅರ್ಹ ವ್ಯಕ್ತಿಗಳನ್ನು ಮವವೊಲಿಸಿ ಸದಸ್ಯರನ್ನಾಗಿ ನೋಂದಾವಣೆ ಮಾಡಬೇಕೆ ವಿನಹ ಕಡ್ಡಾಯವಾಗಿ ಹಿಡಿಯತಕ್ಕದ್ದಲ್ಲ. ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಯಾವುದೇ ಸದಸ್ಯನು ಸರ್ಕಾರಿ ನೌಕರನಾಗಿ ಅಥವಾ ಖಾಸಗಿ ಕಂಪನಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಬೇರೆ ಯಾವುದೇ ಆರೋಗ್ಯ ವಿಮಾ ಯೋಜನೆಯ ಸೌಲಭ್ಯಕ್ಕೆ ಅರ್ಹನಾಗಿದ್ದಲ್ಲಿ, ಅಂತಹವರನ್ನು ಯಶಸ್ವಿನಿ ಯೋಜನೆಯ ಫಲಾನುಭವಿಯಾಗಿ ನೋಂದಾಯಿಸಬಾರದು. ಆದಾಗ್ಯೂ ಯಾವುದೇ ಕಾರಣಕ್ಕಾಗಿ ನೋಂದಾಯಿಸಿದರೂ ಅವರು ಯಶಸ್ವಿನಿ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗುವುದಿಲ್ಲ ಅಲ್ಲದೆ ಅಂತಹ ವ್ಯಕ್ತಿಗಳು ಪಾವತಿಸಿದ ವಂತಿಗೆಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

19. ರಾಜ್ಯದಲ್ಲಿ ಕೆಲವು ಹಾಲು ಉತ್ಪಾದಕರ ಒಕ್ಕೂಟಗಳು ಮತ್ತು ಕೆಲವು ಸಹಕಾರ ಸಂಘ/ಸಂಸ್ಥೆಗಳು ಅವುಗಳ ಸದಸ್ಯರ ಯಶಸ್ವಿನಿ ವಂತಿಗೆಯಲ್ಲಿ ಭಾಗಶಃ ಹಣವನ್ನು ಸಹಕಾರ ಸಂಘದ ಸ್ವಂತ ಬಂಡವಾಳದಿಂದ ಭರಿಸುತ್ತಿವೆ. ಈ ಪದ್ಧತಿಯನ್ನು ರಾಜ್ಯದ ಅರ್ಹ ನಗರ ಸಹಕಾರ ಸಂಘ ಸಂಸ್ಥೆಗಳೂ ಕೂಡ ಅನುಸರಿಸುವಂತೆ ಪ್ರೋತ್ಸಾಹಿಸಲು ಸೂಚಿಸಲಾಗಿದೆ.

20. 2014–15ನೇ ಸಾಲಿನಲ್ಲಿ ಹೊಸದಾಗಿ ನೋಂದಾವಣೆ ಮಾಡಿಕೊಳ್ಳುವ ಸದಸ್ಯರುಗಳು ಸುಳ್ಳು ಮಾಹಿತಿ ಮತ್ತು ಅಕ್ರಮವಾಗಿ ಸದಸ್ಯರ ಅಥವಾ ಸಹಕಾರ ಸಂಘಗಳ ತಪ್ಪಿನಿಂದಾಗಿ ಆಗಿದ್ದರೆ ಗೊತ್ತಿದ್ದು ಅಥವಾ ಗೊತ್ತಿಲ್ಲದೆಯೋ ನೋಂದಾವಣೆ ಹೊಂದಿದ್ದರೆ ಅಂತಹ ವ್ಯಕ್ತಿಗಳು ಯಶಸ್ವಿನಿ ಯೋಜನೆಯಡಿಯಲ್ಲಿ ಸೌಲಭ್ಯವನ್ನು ಪಡೆಯಲು ಅನರ್ಹರು ಹಾಗೂ ಪಾವತಿಸಿದ ವಂತಿಗೆ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೆಯೇ ಅಂತಹ ಫಲಾನುಭವಿಗಳ ಯಶಸ್ವಿನಿ ಯೋಜನೆಯ ಸದಸ್ಯತ್ವ ತಂತಾನೇ ರದ್ದುಗೊಳ್ಳುತ್ತದೆ, ಪ್ರತ್ಯೇಕ ರದ್ದತಿ ಆದೇಶದ ಅವಶ್ಯಕತೆ ಇರುವುದಿಲ್ಲ.

21. ನಗರ ಯಶಸ್ವಿನಿ ಯೋಜನೆಯಡಿಯಲ್ಲಿನ ಮಾಹಿತಿಯನ್ನೊಳಗೊಂಡ ಬ್ರೋಚರ್‌ಗಳನ್ನು ಸಹಕಾರ ಸಂಘಗಳು 2014–15ನೇ ಸಾಲಿಗೆ ಯೋಜನೆಯಡಿಯಲ್ಲಿ ಹೊಸದಾಗಿ ನೋಂದಾಯಿಸುವ ಫಲಾನುಭವಿಗಳಿಗೆ ಅಂದರೇ ಯಶಸ್ವಿನಿ ಕಾರ್ಡ್ ಹೊಂದಿರುವ ಪ್ರಧಾನ ಅರ್ಜಿದಾರರಿಗೆ ಮಾತ್ರ ಈ ಬ್ರೋಚರಗಳನ್ನು ನೀಡಿ, ಬ್ರೋಚರ್‌ನ್ನು ಸ್ವೀಕರಿಸಿದ ಬಗ್ಗೆ ಸ್ವೀಕೃತಿಯನ್ನು ಪಡೆದು ಸಹಕಾರ ಸಂಘಗಳು ಇಟ್ಟುಕೊಂಡಿರಬೇಕು.

22. 2014–15ನೇ ಸಾಲಿನಲ್ಲಿ ಕೆಲವು ಸದಸ್ಯರು ಯಶಸ್ವಿನಿ ವಂತಿಗೆ ಹಣವನ್ನು ಸಹಕಾರ ಸಂಘಕ್ಕೆ ಪಾವತಿ ಮಾಡಿ, ಫೋಟೋ ಇತ್ಯಾದಿ ಅವಶ್ಯಕ ಮಾಹಿತಿಯನ್ನು ಒದಗಿಸದೆ ಇದ್ದರೆ, ಈ ಕಾರಣದಿಂದ ಸಹಕಾರ ಸಂಘದಲ್ಲಿ ಬಾಕಿ ಉಳಿದ ವಂತಿಗೆಯ ಮೊತ್ತವನ್ನು ಸಹಕಾರ ಸಂಘವು ಯಶಸ್ವಿನಿ ಟ್ರಸ್ಟಿಗೆ ನೀಡಿದ ದೇಣಿಗೆಯೆಂದು ಪರಿಗಣಿಸಿ, ಟ್ರಸ್ಟ್‌ನ ಖಾತೆಗೆ ಜಮಾಮಾಡತಕ್ಕದ್ದು.

23. 2014–15ನೇ ಸಾಲಿನ ಯಶಸ್ವಿನಿ ಯೋಜನೆಯ ಅವಧಿಯು ದಿನಾಂಕ:01.06.2014 ರಿಂದ ಪ್ರಾರಂಭವಾಗಿ 31.05.2015 ಮುಗಿಯುತ್ತದೆ. ಆದ ಕಾರಣ ಈ ಸುತ್ತೋಲೆ ಅನ್ವಯ **ಹೊಸದಾಗಿ ನೋಂದಾವಣೆಯಾಗುವ ಫಲಾನುಭವಿಗಳು ಯಶಸ್ವಿನಿ ಯೋಜನೆಯ ಸೌಲಭ್ಯವನ್ನು ದಿನಾಂಕ: 01.06.2014 ರಿಂದ ಪಡೆಯಲು ಅರ್ಹರಾಗುತ್ತಾರೆ**. ಆದ್ದರಿಂದ ಸಹಕಾರ ಸಂಘಗಳು ಸದಸ್ಯರು ನೋಂದಾವಣೆ ಸಂದರ್ಭದಲ್ಲಿ ನೀಡುವ ವಂತಿಗೆ ಹಣಕ್ಕೆ ಸ್ವೀಕೃತಿ ರಶೀದಿಗಳನ್ನು ಫಲಾನುಭವಿಗೆ ಕೊಡುವಾಗ ಯೋಜನೆಯ ಅವಧಿ ಬಗ್ಗೆ ಸ್ಪಷ್ಟವಾಗಿ ತಿಳುವಳಿಕೆಯನ್ನು ಕೂಡಬೇಕು.

ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯ ಮಾರ್ಗಸೂಚಿಗಳ ಬಗ್ಗೆ ತಿಳುವಳಿಕೆ ನೀಡಲು ಆಯಾ ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರು ಅವರ ವ್ಯಾಪ್ತಿಯ ಇಲಾಖಾಧಿಕಾರಿಗಳ, ಜಿಲ್ಲಾ ಸಹಕಾರ ಬ್ಯಾಂಕ್‌ಗಳ, ಹಾಲು ಉತ್ಪಾದಕರ ಒಕ್ಕೂಟಗಳ ಮತ್ತು ಇತರೆ ಪ್ರಮುಖ ಸಹಕಾರ ಸಂಘ / ಸಂಸ್ಥೆಗಳ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳ ಸಭೆಯನ್ನು ಪ್ರಾಂತ ಮಟ್ಟದಲ್ಲಿ ನಿರ್ವಹಿಸಲು ಸೂಚಿಸಿದೆ. ನಂತರ ದಿ:15.03.2014ರೊಳಗೆ ಎಲ್ಲಾ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರುಗಳು ಅವರ ಜಿಲ್ಲೆಯ ಎಲ್ಲಾ ಕಾರ್ಯನಿರತ ನಗರ ಸಹಕಾರ ಸಂಘಗಳ ಅಧ್ಯಕ್ಷರ ಮತ್ತು ಕಾರ್ಯದರ್ಶಿಯವರ, ಸ್ತ್ರೀಶಕ್ತಿ ಗುಂಪು/ ಸ್ವಸಹಾಯ ಗುಂಪು ಮತ್ತು ಸಂಬಂಧಿಸಿದ ಇಲಾಖೆಗಳ ಅಧಿಕಾರಿಗಳ ಸಭೆ ಕರೆದು ಕಾರ್ಯಾಗಾರ ಏರ್ಪಡಿಸಿ ಯೋಜನೆಯ ಮಾರ್ಗಸೂಚಿ ನಿಯಮಗಳು, ಇತಿಮಿತಿಗಳು ಮತ್ತು ಯೋಜನೆಯಿಂದ ಸೌಲಭ್ಯ ಪಡೆಯುವವರ ಬಗ್ಗೆ ಮಾಹಿತಿಯನ್ನು ನೀಡಿ, ತೆಗೆದುಕೊಂಡ ಕ್ರಮದ ಬಗ್ಗೆ ವರದಿಯನ್ನು ಸಹಕಾರ ಸಂಘಗಳ ನಿಬಂಧಕರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿದೆ.

**ಹೆಚ್.ಎಸ್ ನಾಗರಾಜಯ್ಯ**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫) | ನಂ. ೧೬೪ |
|---|---|---|
| **Part – IV-A** | **Bangalore, Wednesday, February 26, 2014 (Phalguna 7, Shaka Varsha 1935)** | **No. 164** |

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 27 ಸಿಎಲ್‌ಎಸ್ 2014, ಬೆಂಗಳೂರು, ದಿನಾಂಕ: 26–02–2014**

ಯಶಸ್ವಿನಿ ಯೋಜನೆಯನ್ನು ಅನುಷ್ಠಾನಗೊಳಿಸಲು ಯಶಸ್ವಿನಿ ಟ್ರಸ್ಟ್‌ನಿಂದ ಮೂರು ವರ್ಷಗಳಿಗೊಮ್ಮೆ ಸರ್ವೀಸ್ ಪ್ರವೈಡರ್‌ನ್ನು ನೇಮಕ ಮಾಡಲಾಗುತ್ತದೆ. ಅದರಂತೆ ಅನುಷ್ಠಾನ ಏಜೆನ್ಸಿಯಾಗಿ ನೇಮಕವಾಗಿರುವ ಮೆ॥ ಮೆಡಿ ಅಸಿಸ್ಟ್ ಇಂಡಿಯಾ ಟಿಪಿಎ ಪ್ರೈ.ಲಿ, ಇವರ ಸೇವಾ ಅವಧಿಯು ದಿನಾಂಕ: 30.11.2013ಕ್ಕೆ ಮುಕ್ತಾಯವಾಗಿರುತ್ತದೆ.

ಆದ್ದರಿಂದ ಈಗಾಗಲೇ ಕನಾಟಕ ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟವಾಗಿರುವ ಅಧಿಸೂಚನೆ: ಸಂಖ್ಯೆ:ಸಿಒ 423 ಸಿಎಲ್‌ಎಸ್ 2012 ಬೆಂಗಳೂರು, ದಿನಾಂಕ:27ನೇ ಸೆಪ್ಟಂಬರ್ 2013ರ ಭಾಗ–1 ರಲ್ಲಿ ನೀಡಿರುವ ಅನುಷ್ಠಾನ ಏಜೆನ್ಸಿ ವಿಳಾಸ ಹಾಗೂ ಜಿಲ್ಲಾ ಸಮನ್ವಯಾಧಿಕಾರಿಗಳ ದೂರವಾಣಿ ಸಂಖ್ಯೆಗಳ ಬದಲಾಗಿ ಈ ಕೆಳಗಿನಂತೆ ಬದಲಾದ ಅನುಷ್ಠಾನ ಏಜೆನ್ಸಿಯ ಹೆಸರು ಹಾಗೂ ವಿಳಾಸ ಮತ್ತು ಜಿಲ್ಲಾ ಸಮನ್ವಯಾಧಿಕಾರಿಯವರ ದೂರವಾಣಿ ಸಂಖ್ಯೆಗಳನ್ನು ಯಶಸ್ವಿನಿ ಯೋಜನೆಯ ಸದಸ್ಯರ ಹಾಗೂ ಸಾರ್ವಜನಿಕರ ಮಾಹಿತಿಗಾಗಿ ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

**ವಿಳಾಸ:** ಮೆ॥ಎಂಡಿ ಇಂಡಿಯಾ ಹೆಲ್ತ್ ಕೇರ್ ನೆಟ್‌ವರ್ಕ್ಸ್,ಬಂಗ್ಲೋ #8, 9ನೇ ಕ್ರಾಸ್, ವಿಲ್ಸನ್ ಗಾರ್ಡನ್, ಬೆಂಗಳೂರು–560027, ಸಹಾಯವಾಣಿ: 080–22111032/22111033,

ವೆಬ್‌ಸೈಟ್–www.mdindianetworx.com, ಇ–ಮೇಲ್: yeshasvini@mdindianetworx.com

**ಜಿಲ್ಲಾ ಸಮನ್ವಯಾಧಿಕಾರಿಯವ ದೂರವಾಣಿ ಸಂಖ್ಯೆ:**

1) ಬಾಗಲಕೋಟೆ – 7483014388, 2) ಬಳ್ಳಾರಿ – 9343353014, 3) ಬೆಂಗಳೂರು – 9342691478, 4) ಬೆಳಗಾವಿ – 9379143193, 5) ಬೀದರ್ – 9342497181, 6) ಬಿಜಾಪುರ – 9341717104, 7) ಚಾಮರಾಜನಗರ – 9342820466, 8) ಚಿತ್ರದುರ್ಗ – 9379861795, 9) ಚಿಕ್ಕಮಗಳೂರು – 7483191019, 10) ಕೊಡಗು – 9342920377, 11) ದಕ್ಷಿಣ ಕನ್ನಡ – 9379535136, 12) ದಾವಣಗೆರೆ – 9341819569, 13) ದಾರವಾಡ – 9341855529, 14) ಗದಗ – 9379486829, 15) ಗುಲ್ಬರ್ಗಾ – 9342175892, 16) ಹಾಸನ – 9342267856, 17) ಹಾವೇರಿ – 9343543437, 18) ಕೋಲಾರ – 9342522123, 19) ಕೊಪ್ಪಳ – 9343264563 20) ಮಂಡ್ಯ – 9341386130, 21) ಮೈಸೂರು – 9342822775, 22) ರಾಯಚೂರು – 9342289953, 23) ಶಿವಮೊಗ್ಗ – 9341615441, 24) ತುಮಕೂರು – 9341999308, 25) ಉಡುಪಿ – 9341874890, 26) ಉತ್ತರ ಕನ್ನಡ – 9342848657, 27) ಯಾದಗಿರಿ – 9342161720, 28) ಚಿಕ್ಕಬಳ್ಳಾಪುರ – 9342022085, 29) ರಾಮನಗರ – 9341382644.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಸ್ ನಾಗರಾಜಯ್ಯ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| **ಭಾಗ – IV-A** | **ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫)** | **ನಂ. ೧೬೬** |
| **Part – IV-A** | **Bangalore, Wednesday, February 26, 2014 (Phalguna 7, Shaka Varsha 1935)** | **No. 166** |


## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

### ಸಂ: ನಅಇ 298 ಬೆಂರೂಪ್ರಾ 2013, ಬೆಂಗಳೂರು, ದಿನಾಂಕ: 26–02–2014

ದಿನಾಂಕ: 14.09.2012ರಂದು ಹೊರಡಿಸಲಾಗಿದ್ದ, ಅಧಿಸೂಚನೆ ಸಂಖ್ಯೆ:ನಅಇ 162 ಬೆಂರೂಪ್ರಾ 2011ನ್ನು ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರದ ಮಹಾಯೋಜನೆಯ ವ್ಯಾಪ್ತಿಗೆ ಮತ್ತು ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರದ ಮಹಾಯೋಜನೆಯ ವ್ಯಾಪ್ತಿಗೆ ಅನ್ವಯಿಸದಂತೆ ಹಿಂಪಡೆದು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ (1963ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 13ಇ ರ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಮಂಗಳೂರು ಮತ್ತು ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರಗಳ ಮಹಾಯೋಜನೆಗಳ ವ್ಯಾಪ್ತಿಗೆ ಒಳಪಡುವ ಪ್ರದೇಶಗಳಲ್ಲಿ ಅನುಮೋದನೆಗೊಂಡಿರುವ ಮಹಾಯೋಜನೆಗಳ ವಲಯ ನಿಯಮಾವಳಿಗಳ ಉಪಯೋಜನೆಯ ನಿಯಮಗಳಿಗೆ ತಿದ್ದುಪಡಿ ಪ್ರಸ್ತಾಪಿಸಿ, ಕರಡು ಅಧಿಸೂಚನೆ ಸಂಖ್ಯೆ:ನಅಇ 298 ಬೆಂರೂಪ್ರಾ 2013, ದಿನಾಂಕ;26.12.2013ನ್ನು ಕರ್ನಾಟಕ ವಿಶೇಷ ರಾಜ್ಯ ಪತ್ರದಲ್ಲಿ (ಭಾಗ–IV A ದಿನಾಂಕ:27.12.2013) ಪ್ರಕಟಿಸಿ, ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಟಣೆಗೊಂಡ ದಿನಾಂಕದಿಂದ 30 ದಿನಗಳೊಳಗಾಗಿ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿರುವುದರಿಂದ;

ಮತ್ತು ಸದರಿ ರಾಜ್ಯ ಪತ್ರವನ್ನು 2013ರ ಡಿಸೆಂಬರ್ 27 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಸ್ವೀಕರಿಸಿದ್ದು, ಮತ್ತು ಪರಿಗಣಿಸಲಾಗಿರುವುದರಿಂದ;

ಕರ್ನಾಟಕ ಸರ್ಕಾರವು 1961ರ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮದ (1963ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 13ಇ ರ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡಂತೆ ತಿದ್ದುಪಡಿ ಮಾಡಿರುತ್ತದೆ.

ಉಡುಪಿ ಹಾಗೂ ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಸಂಬಂಧಿಸಿದಂತೆ ಸರ್ಕಾರಿ ಆದೇಶ ಸಂಖ್ಯೆ:ನಅಇ 422 ಮೈಅಪ್ರಾ 2008, ದಿನಾಂಕ:07.08.2008 ಮತ್ತು ನಅಇ 186 ಮೈಅಪ್ರಾ 2009, ದಿನಾಂಕ:10.09.2009ರಲ್ಲಿ ಅನುಮೋದಿಸಲಾದ ಮಹಾಯೋಜನೆಯ ವಲಯ ಈ ಕೆಳಕಂಡಂತೆ ವಿನಿಯಮಗಳನ್ನು ಮಾರ್ಪಾಡಿಸಿದೆ, ಎಂದರೆ.

### ಭೂ ವಿಭಜನೆ ಮಾಡುವಾಗ ಬಯಲು ಜಾಗ ಮತ್ತು ನಾಗರೀಕ ಸೌಲಭ್ಯಗಳ ವಿನಾಯಿತಿ ಕುರಿತು

ಭೂ ಪರಿವರ್ತನೆಯಾದ ಆದೇಶದಲ್ಲಿ ಜಮೀನಿನ ವಿಸ್ತೀರ್ಣವು 1,000 ಚದರ ಮೀಟರ್ (0.10 ಹೆಕ್ಟೇರ್ಸ್) ಅಥವಾ ಅದಕ್ಕಿಂತ ಕಡಿಮೆ ಇದ್ದಲ್ಲಿ ಮಾತ್ರ ಪ್ರಾಧಿಕಾರವು ಖಾಸಗಿ ವಸತಿ ವಿನ್ಯಾಸಗಳನ್ನು ಅನುಮೋದಿಸುವಾಗ ಮಹಾಯೋಜನೆಯ ಅನುಮೋದಿತ ವಲಯ ನಿಯಮಾವಳಿಗಳಲ್ಲಿನ ಉಪ ವಿಭಜನೆ ನಿಯಮಗಳಲ್ಲಿರುವಂತೆ ವಿನ್ಯಾಸ ಉದ್ಯಾನವನ:ಬಯಲುಜಾಗ ಹಾಗೂ ನಾಗರೀಕ ಸೌಲಭ್ಯಗಳಿಗಾಗಿ ಕಾಯ್ದಿರಿಸುವ ಅಗತ್ಯವಿರುವುದಿಲ್ಲ. ಆದರೆ, ಇದಕ್ಕೆ ಬದಲಾಗಿ ಒಟ್ಟಾರೆ ಶೇ:15ರಷ್ಟು ವಿಸ್ತೀರ್ಣವು ಜಮೀನಿಗೆ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನಿಗದಿಪಡಿಸಿದ ಭೂ ಪರಿವರ್ತಿತ ಜಮೀನಿನ ಮಾರ್ಗಸೂಚಿ ಬೆಲೆಯನ್ನು (Guidance Value) ಆಧರಿಸಿ, ಹಣವನ್ನು ಜಮೀನಿನ ಮಾಲೀಕರು/ಅಭಿವೃದ್ಧಿದಾರರಿಂದ ವಿನಾಯಿತಿ ಶುಲ್ಕವಾಗಿ

ಭರಿಸಿಕೊಳ್ಳತಕ್ಕದ್ದು ಹಾಗೂ ಒಂದು ವೇಳೆ ವಿನ್ಯಾಸದಲ್ಲಿ ಅಗತ್ಯ ರಸ್ತೆ ಜಾಲದ ಪ್ರದೇಶವನ್ನು ಅಳವಡಿಸಿದ ನಂತರ ಹೆಚ್ಚುವರಿ ಜಾಗ ಉಳಿದಲ್ಲಿ ಅದನ್ನು ವಸತಿ ಉದ್ದೇಶಕ್ಕಾಗಿ ಪರಿಗಣಿಸತಕ್ಕದ್ದು.

ಸದರಿ ವಿನ್ಯಾಸದಲ್ಲಿ ಅಳವಡಿಸಿದ ರಸ್ತೆ ಜಾಲದ ಪ್ರದೇಶವು ಶೇ:45 ಅಥವಾ ಅದಕ್ಕಿಂತ ಹೆಚ್ಚಿನ ವಿಸ್ತೀರ್ಣದ ಜಾಗವು ಒಳಗೊಂಡಂತಹ ಸಂದರ್ಭದಲ್ಲಿ ಉದ್ಯಾನವನ/ಬಯಲುಜಾಗ ಮತ್ತು ನಾಗರೀಕ ಸೌಲಭ್ಯ ಜಾಗದ ವಿನಾಯಿತಿ ಶುಲ್ಕವನ್ನು ಪಾವತಿಸಿಕೊಳ್ಳುವ ಅಗತ್ಯವಿರುವುದಿಲ್ಲ.

ಜಮೀನಿನ ಮಾಲೀಕರು/ಅಭಿವೃದ್ಧಿದಾರರು ಸದರಿ ವಿನಾಯಿತಿ ಶುಲ್ಕವನ್ನು ಪಾವತಿಸಲು ನಿರಾಕರಿಸಿದಲ್ಲಿ ವಸತಿಗಾಗಿ ಗರಿಷ್ಠ ಶೇ:55 ಹಾಗೂ ರಸ್ತೆ ನಂತರ ಉಳಿಯುವ ವಿಸ್ತೀರ್ಣದ ಜಾಗವನ್ನು ವಿನ್ಯಾಸ ನಕ್ಷೆಯಲ್ಲಿ ಒಂದೇ ಕಡೆ ಬರುವಂತೆ ಪ್ರತ್ಯೇಕವಾಗಿ ಗುರುತಿಸತಕ್ಕದ್ದು, ಹಾಗೂ ಪ್ರಾಧಿಕಾರ/ಸ್ಥಳೀಯ ಸಂಸ್ಥೆಗಳು ಸದರಿ ಜಾಗವನ್ನು ಪುಕ್ಕಟೆಯಾಗಿ ನೋಂದಾಯಿತ ಪರಿತ್ಯಜನಾ ಪತ್ರದ ರೂಪದಲ್ಲಿ ಸ್ವಾಧೀನಕ್ಕೆ ಪಡೆದು ನಂತರ ಹರಾಜು ಮೂಲಕ ವಿಲೇವಾರಿ ಮಾಡಬಹುದಾಗಿದೆ.

ಉದ್ಯಾನವನ/ಬಯಲುಜಾಗ ಮತ್ತು ನಾಗರೀಕ ಸೌಲಭ್ಯಗಳ ವಿನಾಯಿತಿ ಶುಲ್ಕ ಅಥವಾ ಪ್ರಾಧಿಕಾರ/ಸ್ಥಳೀಯ ಸಂಸ್ಥೆಗಳು ಸ್ವಾಧೀನಕ್ಕೆ ತೆಗೆದುಕೊಳ್ಳುವ ಜಾಗವನ್ನು ಹರಾಜು ಮೂಲಕ ವಿಲೇವಾರಿ ಮಾಡಿದಾಗ ಬರುವ ಮೊಬಲಗು ಸೇರಿದಂತೆ ಖಾಸಗಿ ಮಾಲೀಕರಿಂದ/ಅಭಿವೃದ್ಧಿದಾರರಿಂದ ಭರಿಸಿಕೊಳ್ಳುವ ಹಣವನ್ನು ಪ್ರಾಧಿಕಾರವು/ಸ್ಥಳೀಯ ಸಂಸ್ಥೆಗಳು ಪ್ರತ್ಯೇಕ ಲೆಕ್ಕ ಶೀರ್ಷಿಕೆಯಡಿ ಖಾತೆ ತೆರೆದು ಇಡತಕ್ಕದ್ದು ಹಾಗೂ ಈ ಹಣವನ್ನು ಮಹಾಯೋಜನೆಯಲ್ಲಿ ಕಾಯ್ದಿರಿಸಿರುವ ಉದ್ಯಾನವನ/ಬಯಲು ಜಾಗಗಳನ್ನು ಸರ್ಕಾರದ ಪೂರ್ವಾನುಮತಿಯೊಂದಿಗೆ ಭೂ ಸ್ವಾಧೀನಪಡಿಸಿಕೊಳ್ಳಲು ಮಾತ್ರ ಬಳಸಿಕೊಳ್ಳತಕ್ಕದ್ದು ಹಾಗೂ ಪ್ರಾಧಿಕಾರ ಯಾವುದೇ ಕಾರಣಕ್ಕೂ ಈ ಹಣವನ್ನು ಬೇರೆ ಉದ್ದೇಶಕ್ಕೆ ಬಳಸಬಾರದು.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| **ಭಾಗ – IV-A** | **ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫)** | **ನಂ. ೧೬೭** |
| **Part – IV-A** | **Bangalore, Wednesday, February 26, 2014 (Phalguna 7, Shaka Varsha 1935)** | **No. 167** |

## KARNATAKA LEGISLATIVE ASSEMBLY SECRETARIAT

### NOTIFICATION

**No. KLA/LGA/31/LA Bill/2014, Bangalore, Dated: 26-2-2014**

The following Bill was introduced in Legislative Assembly on 26-2-2014

## ಕರ್ನಾಟಕ ವಿಧಾನ ಸಭೆ
## ಹದಿನಾಲ್ಕನೇ ವಿಧಾನ ಸಭೆ
## ಮೂರನೇ ಅಧಿವೇಶನ

### ಕರ್ನಾಟಕ ಧನವಿನಿಯೋಗ (ಲೇಖಾನುದಾನ) ವಿಧೇಯಕ, 2014

### (2014ರ ವಿಧಾನಸಭೆಯ ವಿಧೇಯಕ ಸಂಖ್ಯೆ–31)

**2014–15**ನೇ ಹಣಕಾಸು ಭಾಗ ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಮೊತ್ತ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

**2014–15**ನೇ ಹಣಕಾಸು ಭಾಗ ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ :

ಇದು ಭಾರತ ಗಣರಾಜ್ಯದ ಅರವತ್ತೈದನೇ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮವಾಗಲಿ.

**1. ಸಂಕ್ಷಿಪ್ತ ಹೆಸರು :** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ (ಲೇಖಾನುದಾನ) ಅಧಿನಿಯಮ, 2014 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ: 2014–15**ನೇ ಹಣಕಾಸು ಭಾಗ ವರ್ಷಕ್ಕಾಗಿ **4719524.34** ಲಕ್ಷ ರೂಪಾಯಿಗಳ ನೀಡಿಕೆ: ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟ ಪಡಿಸಲಾದ ಸೇವೆಗಳ ಸಂಬಂಧದಲ್ಲಿ **2014–15ನೇ** ಹಣಕಾಸು ಭಾಗ ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ **ನಲವತ್ತೇಳು ಸಾವಿರದ ಒಂದು ನೂರ ತೊಂಭತ್ತೈದು ಕೋಟಿ ಇಪ್ಪತ್ತನಾಲ್ಕು ಲಕ್ಷದ ಮೂವತ್ತನಾಲ್ಕು ಸಾವಿರ** ರೂಪಾಯಿಗಳಿಗೆ ಮೀರದಷ್ಟು ಮೊಬಲಗನ್ನು ಮಾತ್ರ ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು.

**3. ಧನವಿನಿಯೋಗ:** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**

**(2 ಮತ್ತು 3ನೇ ಪ್ರಕರಣಗಳನ್ನು ನೋಡಿ)**

(₹. ಲಕ್ಷಗಳಲ್ಲಿ)

| | | | ಮೀರದ ಮೊಬಲಗು | | |
|---|---|---|---|---|---|
| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | ಒಟ್ಟು |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 1,77,249.14 | 9.33 | 1,77,258.47 |
| | | ಬಂಡವಾಳ | 2,633.16 | ... | 2,633.16 |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 58,460.18 | 3.47 | 58,463.65 |
| | | ಬಂಡವಾಳ | 7,480.54 | ... | 7,480.54 |
| 03 | ಆರ್ಥಿಕ | ರಾಜಸ್ವ | 4,10,099.35 | 9.67 | 4,10,109.02 |
| | | ಬಂಡವಾಳ | 598.94 | ... | 598.94 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ರಾಜಸ್ವ | 34,719.39 | 5,981.18 | 40,700.57 |
| | | ಬಂಡವಾಳ | 15,298.48 | ... | 15,298.48 |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 1,61,862.18 | ... | 1,61,862.18 |
| | | ಬಂಡವಾಳ | 8,873.18 | ... | 8,873.18 |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ | ರಾಜಸ್ವ | 283.97 | ... | 283.97 |
| | | ಬಂಡವಾಳ | 20,957.93 | ... | 20,957.93 |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 2,55,200.50 | 479.95 | 2,55,680.45 |
| | | ಬಂಡವಾಳ | 56,316.53 | ... | 56,316.53 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 40,901.15 | 15,004.17 | 55,905.32 |
| | | ಬಂಡವಾಳ | 416.63 | ... | 416.63 |
| 09 | ಸಹಕಾರ | ರಾಜಸ್ವ | 20,584.63 | ... | 20,584.63 |
| | | ಬಂಡವಾಳ | 1,625.84 | ... | 1,625.84 |
| 10 | ಸಮಾಜ ಕಲ್ಯಾಣ | ರಾಜಸ್ವ | 1,62,311.89 | ... | 1,62,311.89 |
| | | ಬಂಡವಾಳ | 53,511.02 | ... | 53,511.02 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 1,19,052.76 | ... | 1,19,052.76 |
| | | ಬಂಡವಾಳ | 3,288.00 | ... | 3,288.00 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 11,279.32 | ... | 11,279.32 |
| | | ಬಂಡವಾಳ | 9,818.94 | ... | 9,818.94 |
| 13 | ಆಹಾರ ಮತ್ತು ನಾಗರಿಕ ಸರಬರಾಜು | ರಾಜಸ್ವ | 1,49,001.15 | 1.67 | 1,49,002.82 |
| | | ಬಂಡವಾಳ | 126.65 | ... | 126.65 |
| 14 | ಕಂದಾಯ | ರಾಜಸ್ವ | 1,38,653.65 | 1,039.90 | 1,39,693.55 |
| | | ಬಂಡವಾಳ | 3,380.33 | ... | 3,380.33 |
| 15 | ಮಾಹಿತಿ ತಂತ್ರಜ್ಞಾನ | ರಾಜಸ್ವ | 6,216.00 | ... | 6,216.00 |
| | | ಬಂಡವಾಳ | 466.62 | ... | 466.62 |

## ಅನುಸೂಚಿ

### (2 ಮತ್ತು 3ನೇ ಪ್ರಕರಣಗಳನ್ನು ನೋಡಿ)

(₹. ಲಕ್ಷಗಳಲ್ಲಿ)

| | | | ಮೀರದ ಮೊಬಲಗು | | |
|---|---|---|---|---|---|
| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | ಒಟ್ಟು |
| 1 | 2 | | 3 | 4 | 5 |
| 16 | ವಸತಿ | ರಾಜಸ್ವ | 79,668.87 | ... | 79,668.87 |
| | | ಬಂಡವಾಳ | 2,217.44 | ... | 2,217.44 |
| 17 | ಶಿಕ್ಷಣ | ರಾಜಸ್ವ | 6,87,540.25 | ... | 6,87,540.25 |
| | | ಬಂಡವಾಳ | 22,542.91 | ... | 22,542.91 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 22,831.06 | ... | 22,831.06 |
| | | ಬಂಡವಾಳ | 9,672.44 | ... | 9,672.44 |
| 19 | ನಗರಾಭಿವೃದ್ಧಿ | ರಾಜಸ್ವ | 2,58,324.59 | ... | 2,58,324.59 |
| | | ಬಂಡವಾಳ | 41,482.85 | ... | 41,482.85 |
| 20 | ಲೋಕೋಪಯೋಗಿ | ರಾಜಸ್ವ | 86,320.05 | ... | 86,320.05 |
| | | ಬಂಡವಾಳ | 1,34,791.49 | ... | 1,34,791.49 |
| 21 | ಜಲಸಂಪನ್ಮೂಲ | ರಾಜಸ್ವ | 44,601.03 | ... | 44,601.03 |
| | | ಬಂಡವಾಳ | 2,67,008.58 | ... | 2,67,008.58 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ | ರಾಜಸ್ವ | 1,83,416.47 | ... | 1,83,416.47 |
| | | ಬಂಡವಾಳ | 17,314.19 | ... | 17,314.19 |
| 23 | ಕಾರ್ಮಿಕ | ರಾಜಸ್ವ | 24,726.60 | ... | 24,726.60 |
| | | ಬಂಡವಾಳ | 1,109.89 | ... | 1,109.89 |
| 24 | ಇಂಧನ | ರಾಜಸ್ವ | 2,24,584.65 | 100.00 | 2,24,684.65 |
| | | ಬಂಡವಾಳ | 30,066.66 | ... | 30,066.66 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 9,614.90 | ... | 9,614.90 |
| | | ಬಂಡವಾಳ | 201.65 | ... | 201.65 |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 5,845.93 | ... | 5,845.93 |
| | | ಬಂಡವಾಳ | 20,464.62 | ... | 20,464.62 |
| 27 | ಕಾನೂನು | ರಾಜಸ್ವ | 20,879.83 | ... | 20,879.83 |
| | | ಬಂಡವಾಳ | 333.30 | ... | 333.30 |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ | 5,279.58 | 95.55 | 5,375.13 |
| 29 | ಋಣ ಮೇಲುಸ್ತುವಾರಿ | ರಾಜಸ್ವ | ... | 3,39,966.00 | 3,39,966.00 |
| | | ಬಂಡವಾಳ | ... | 2,25,325.57 | 2,25,325.57 |
| | **ಜುಮ್ಲಾ** | | **4,131,507.88** | **588,016.46** | **4,719,524.34** |

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2014–15ನೇ ಹಣಕಾಸು ಭಾಗ ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ಭಾರತ ಸಂವಿಧಾನದ ಅನುಚ್ಛೇದ 206 (1) (a) ಅಡಿಯಲ್ಲಿ ಲೇಖಾನುದಾನ ಮಂಜೂರಾದ ಮೊತ್ತಕ್ಕೆ ವಿನಿಯೋಗಿಸಲು 204ನೇ ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಸಿದ್ದರಾಮಯ್ಯ**
ಮುಖ್ಯ ಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

# ವಿಶೇಷ ರಾಜ್ಯ ಪತ್ರಿಕೆ



| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫) | ನಂ. ೧೬೮ |
| Part – IV-A | Bangalore, Wednesday, February 26, 2014 (Phalguna 7, Shaka Varsha 1935) | No. 168 |



**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/32/LA Bill/2014, Bangalore, Dated: 26-2-2014**

The following Bill was introduced in Legislative Assembly on 26-2-2014

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**ಮೂರನೇ ಅಧಿವೇಶನ**

## ಕರ್ನಾಟಕ ತೆರಿಗೆ ಕಾನೂನುಗಳ (ತಿದ್ದುಪಡಿ) ವಿಧೇಯಕ, 2014

**(2014ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 32)**

ಕರ್ನಾಟಕ ರಾಜ್ಯದಲ್ಲಿ ಜಾರಿಯಲ್ಲಿರುವ ಕೆಲವು ತೆರಿಗೆ ಕಾನೂನುಗಳನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕೆಲವು ತೆರಿಗೆ ಕಾನೂನುಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ ;

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ತೆರಿಗೆ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2014 ಎಂದು ಕರೆಯತಕ್ಕದ್ದು.

(2) 1 ಮತ್ತು 2ನೇ ಪ್ರಕರಣಗಳು 2014ನೇ ಮಾರ್ಚ್ ಒಂದನೇ ದಿನಾಂಕದಿಂದ ಹಾಗೂ 3ನೇ ಪ್ರಕರಣವು 2014ನೇ ಏಪ್ರಿಲ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 1979ರ ಕರ್ನಾಟಕ ಅಧಿನಿಯಮ 22ರ ತಿದ್ದುಪಡಿ.–** ಕರ್ನಾಟಕ ವಿಲಾಸಗಳ ಮೇಲೆ ತೆರಿಗೆ ಅಧಿನಿಯಮ, 1979ರ (1979ರ ಕರ್ನಾಟಕ ಅಧಿನಿಯಮ 22) 3ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಕೋಷ್ಟಕದಲ್ಲಿ ಕ್ರಮ ಸಂಖ್ಯೆ 1 ಕ್ಕೆ ಸಂಬಂಧಿಸಿದ ನಮೂದುಗಳಲ್ಲಿ "ಐದು ನೂರು ರೂಪಾಯಿಗಳಿಗಿಂತ" ಎಂಬ ಪದಗಳಿಗೆ ಏಳು ನೂರ ಐವತ್ತು ರೂಪಾಯಿಗಳಿಗಿಂತ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**3. 1979ರ ಕರ್ನಾಟಕ ಅಧಿನಿಯಮ 27ರ ತಿದ್ದುಪಡಿ.–** ಕರ್ನಾಟಕ ಸರಕುಗಳ ಪ್ರವೇಶದ ಮೇಲೆ ತೆರಿಗೆ ಅಧಿನಿಯಮ, 1979ರ (1979ರ ಕರ್ನಾಟಕ ಅಧಿನಿಯಮ 27),–

(1) 5ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"5. ವಿವರ ಪಟ್ಟಿಗಳು.–** (1) (2) ರಿಂದ (4)ನೇ ಉಪಪ್ರಕರಣಗಳಿಗೆ ಒಳಪಟ್ಟು, ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು ಮತ್ತು ಈ ಅಧಿನಿಯಮದ ಅಡಿಯಲ್ಲಿ ತಾನಾಗಿಯೇ ನೋಂದಾಯಿತನಾಗಲು ಹೊಣೆಗಾರನಾದ ಪ್ರತಿಯೊಬ್ಬ ವ್ಯಾಪಾರಿಯು, ಎಲೆಕ್ಟ್ರಾನಿಕ್ ವಿಧಾನಗಳು ಸೇರಿದಂತೆ ಅಂಥ ನಮೂನೆಯಲ್ಲಿ ಮತ್ತು ವಿಧಾನದಲ್ಲಿ ಒಂದು ವಿವರ ಪಟ್ಟಿಯನ್ನು ತೆರಿಗೆ ನಿರ್ಧರಣೆ ಪ್ರಾಧಿಕಾರಕ್ಕೆ ಒದಗಿಸತಕ್ಕದ್ದು ಮತ್ತು ಇಪ್ಪತ್ತು ದಿನಗಳೊಳಗೆ ಅಥವಾ ಹಿಂದಿನ ತಿಂಗಳ ಕೊನೆಯ ತರುವಾಯದ ಹದಿನೈದು ದಿನಗಳೊಳಗೆ ಅಥವಾ ನಿಯಮಿಸಬಹುದಾದಂತೆ ಯಾವುದೇ ಇತರೆ ತೆರಿಗೆ ಅವಧಿಯೊಳಗೆ ಅಂಥ ವಿವರ ಪಟ್ಟಿಯ ಮೇಲೆ ಬಾಕಿ ಇರುವ ತೆರಿಗೆಯನ್ನು ಸಂದಾಯ ಮಾಡತಕ್ಕದ್ದು:

ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ ನಿರ್ದಿಷ್ಟಪಡಿಸಲಾದ ವರ್ಗದ ವ್ಯಾಪಾರಿಗಳು, ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ವಿದ್ಯುನ್ಮಾನ ವಿಧಾನದಲ್ಲಿ, ನಿಯಮಿಸಲಾದ ನಮೂನೆಯಲ್ಲಿ ವಿವರ ಪಟ್ಟಿಗಳನ್ನು ತಯಾರಿಸಲು ವಿವರಗಳನ್ನು ಒದಗಿಸತಕ್ಕದ್ದು ಅಥವಾ ನಿಯಮಿಸಲಾದ ನಮೂನೆಯಲ್ಲಿ ವಿವರ ಪಟ್ಟಿಗಳನ್ನು ಸಲ್ಲಿಸತಕ್ಕದ್ದು:

ಮತ್ತು ಪರಂತು, ಆಯುಕ್ತರು ಅಧಿಸೂಚಿಸಬಹುದಾದಂತೆ ನಿರ್ದಿಷ್ಟಪಡಿಸಿದ ವರ್ಗದ ವ್ಯಾಪಾರಿಗಳು, ವಿವರ ಪಟ್ಟಿಗಳ ಆಧಾರದ ಮೇಲೆ ತೆರಿಗೆಯನ್ನು, ಹೊರಡಿಸಿದ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ವಿಧಾನದಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಸಂದಾಯ ಮಾಡತಕ್ಕದ್ದು.

(2) ಒದಗಿಸಲಾದ ವಿವರ ಪಟ್ಟಿಯಲ್ಲಿ ಘೋಷಿಸಲಾದ ಸರಕುಗಳ ಪ್ರವೇಶದ ಮೇಲಿನ ತೆರಿಗೆಯನ್ನು, ಅಂಥ ತೆರಿಗೆಯ ಸಂದಾಯಕ್ಕಾಗಿ ನೋಟೀಸನ್ನು ನೀಡುವ ಅಗತ್ಯವಿಲ್ಲದಂತೆ, (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯವಾದಾಗ ಸಂದಾಯ ಮಾಡತಕ್ಕದ್ದು.

(3) ನಿರ್ದಿಷ್ಟಪಡಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು, ತೆರಿಗೆ ನಿರ್ಧರಣೆ ಪ್ರಾಧಿಕಾರವು ಯಾವೊಬ್ಬ ನೋಂದಾಯಿತ ವ್ಯಾಪಾರಿಯನ್ನು,-

(ಎ) ಅಂಥ ಅವಧಿಗಳಿಗಾಗಿ ಒಂದು ವಿವರ ಪಟ್ಟಿಯನ್ನು ಸಲ್ಲಿಸಲು; ಅಥವಾ

(ಬಿ) ನೋಂದಾಯಿತ ವ್ಯಾಪಾರಿಯು ಒಂದಕ್ಕಿಂತ ಹೆಚ್ಚಿನ ವ್ಯಾಪಾರ ಸ್ಥಳಗಳನ್ನು ಹೊಂದಿರುವಲ್ಲಿ, ಪ್ರತ್ಯೇಕ ಶಾಖಾ ವಿವರ ಪಟ್ಟಿಗಳನ್ನು ಒದಗಿಸಲು,

- ಅಗತ್ಯಪಡಿಸಬಹುದು.

(4) 5-ಡಿ ಪ್ರಕರಣದ (3)ನೇ ಉಪಪ್ರಕರಣದ ಅಡಿಯಲ್ಲಿ ಸಲ್ಲಿಸಿದ ವಿವರಪಟ್ಟಿಯನ್ನು ಹೊರತುಪಡಿಸಿ, ಈ ಅಧಿನಿಯಮದ ಅಡಿಯಲ್ಲಿ ಒಂದು ವಿವರಪಟ್ಟಿಯನ್ನು ನೀಡಿರುವ ಯಾವೊಬ್ಬ ವ್ಯಾಪಾರಿಯು, ತೆರಿಗೆ ನಿರ್ಧರಣೆ ಪ್ರಾಧಿಕಾರವು ಮಾಡಿದ ತಪಾಸಣೆಯ ಅಥವಾ ಯಾವುದೇ ಇತರ ಮಾಹಿತಿ ಅಥವಾ ಸಾಕ್ಷ್ಯವನ್ನು ಸ್ವೀಕರಿಸಿದ ಕಾರಣದ ಹೊರತಾಗಿ, ಅದರಲ್ಲಿ ಯಾವುದೇ ಲೋಪ ಅಥವಾ ಸರಿಯಲ್ಲದ ಹೇಳಿಕೆಯು ಒಳಗೊಂಡಿದ್ದರೆ,-

(ಎ) ಆತನು, ಮುಂಬರುವ ತೆರಿಗೆ ಅವಧಿಗಾಗಿ ವಿವರ ಪಟ್ಟಿಕೆಯನ್ನು ಸಲ್ಲಿಸುವುದಕ್ಕಾಗಿ ನಿಯಮಿಸಲಾದ ಕಾಲದೊಳಗೆ ಒಂದು ಪರಿಷ್ಕೃತ ವಿವರಪಟ್ಟಿಯನ್ನು ಒದಗಿಸತಕ್ಕದ್ದು; ಮತ್ತು

(ಬಿ) ಆತನು, ತೆರಿಗೆ ನಿರ್ಧರಣೆ ಪ್ರಾಧಿಕಾರದಿಂದ ಹಾಗೆ ಅನುಮತಿಸಲ್ಪಟ್ಟಲ್ಲಿ, ತದನಂತರ ಯಾವುದೇ ಸಮಯದಲ್ಲಿ ಸಂಬಂಧಿಸಿದ ತೆರಿಗೆ ಅವಧಿಯ ಮುಕ್ತಾಯದಿಂದ ಆರು ತಿಂಗಳುಗಳೊಳಗೆ ಒಂದು ಪರಿಷ್ಕೃತ ವಿವರ ಪಟ್ಟಿಯನ್ನು ಒದಗಿಸತಕ್ಕದ್ದು.

(5) ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು, ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಅಂಥ ವಿವರಗಳನ್ನು ಒಳಗೊಂಡಿರುವ ವಿವರಣೆಯನ್ನು ಅಂಥ ಅವಧಿಯೊಳಗೆ ತೆರಿಗೆ ನಿರ್ಧರಣೆ ಪ್ರಾಧಿಕಾರಕ್ಕೆ ಪ್ರತಿ ವರ್ಷವು ಸಲ್ಲಿಸತಕ್ಕದ್ದು."

(2) 5-ಬಿ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

**"5-ಬಿ. ವಿವರ ಪಟ್ಟಿಗಳನ್ನು ಒದಗಿಸಲು ಅಥವಾ ವಿವರ ಪಟ್ಟಿಯ ಮೇಲೆ ಘೋಷಿಸಲಾದ ತೆರಿಗೆಯನ್ನು ಸಂದಾಯ ಮಾಡಲು ಅಥವಾ ಇತರ ಮೊಬಲಗನ್ನು ಸಂದಾಯ ಮಾಡಲು ತಪ್ಪಿದಲ್ಲಿ ಬಡ್ಡಿ.-** (1) ಪ್ರತಿಯೊಬ್ಬ ವ್ಯಾಪಾರಿಯು, ವಿವರ ಪಟ್ಟಿಯ ಮೇಲೆ ಘೋಷಿಸಬೇಕಾಗಿದ್ದ ಆದರೆ, ಅದರಿಂದ ಬಿಟ್ಟುಬಿಡಲಾಗಿದ್ದ, ತೆರಿಗೆಯ ಮೇಲೆ, 20-ಬಿ ಪ್ರಕರಣದ (2)ನೇ ಉಪಪ್ರಕರಣಕ್ಕೆ ಒಳಪಟ್ಟು ಹಾಗೆ ಬಿಟ್ಟುಬಿಡಲಾದ ಮೂರು ತಿಂಗಳೊಳಗೆ ಅದನ್ನು ಸರಿಪಡಿಸದಿದ್ದ ಹೊರತು ಯಾವುದೇ ಮೊಬಲಗಿನ ಮೇಲೆ ಸರಳ ಬಡ್ಡಿಯನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು ಮತ್ತು ತೆರಿಗೆಯನ್ನು ಘೋಷಿಸಬೇಕಾಗಿದ್ದ ದಿನಾಂಕದಿಂದ ಅಂಥ ಬಡ್ಡಿಯನ್ನು ಸಂದಾಯ ಮಾಡಬೇಕಾಗುತ್ತದೆ ಮತ್ತು ನಿಯಮಿಸಬಹುದಾದಂತೆ ಅಂಥ ನಮೂನೆಯಲ್ಲಿ ಮತ್ತು ಅಂಥ ರೀತಿಯಲ್ಲಿ ಬಡ್ಡಿಯನ್ನು ಸಂದಾಯ ಮಾಡಲು ವ್ಯಾಪಾರಿಯು ತನ್ನ ಬದ್ಧತೆಯನ್ನು ಘೋಷಿಸತಕ್ಕದ್ದು.

(2) ಈ ಅಧಿನಿಯಮದ ಅಡಿಯಲ್ಲಿ ಒಬ್ಬ ವ್ಯಾಪಾರಿಯು ಒಂದು ವಿವರಪಟ್ಟಿಯನ್ನು ಒದಗಿಸಬೇಕೆಂದು ಅಗತ್ಯಪಡಿಸಲಾಗಿದ್ದು ಅವನು,-

(ಎ) ವಿವರ ಪಟ್ಟಿಯ ಮೇಲೆ ಘೋಷಿಸಿದ್ದ ತೆರಿಗೆಯ ಯಾವುದೇ ಮೊಬಲಗನ್ನು ಅಥವಾ ಹೆಚ್ಚುವರಿ ತೆರಿಗೆಯನ್ನು ಸಂದಾಯ ಮಾಡಲು ತಪ್ಪಿದಲ್ಲಿ, ಅಥವಾ

(ಬಿ) ಹೆಚ್ಚುವರಿ ತೆರಿಗೆ ಘೋಷಿಸಿ, ತೆರಿಗೆಯನ್ನು ಸಂದಾಯ ಮಾಡಬೇಕಾಗಿದ್ದ ಅವಧಿಗೆ ಮೀರಿ ಮೂರು ತಿಂಗಳುಗಳ ನಂತರ ಒಂದು ಪರಿಷ್ಕೃತ ವಿವರ ಪಟ್ಟಿಯನ್ನು ಸಲ್ಲಿಸಿದ್ದು ಆದರೆ, (1)ನೇ ಉಪಪ್ರಕರಣದ ಅಡಿಯಲ್ಲಿ ಸಂದಾಯ ಮಾಡತಕ್ಕದ್ದೆಂದು ಘೋಷಿಸಿದ ಯಾವುದೇ ಬಡ್ಡಿಯನ್ನು ಸಂದಾಯ ಮಾಡಲು ತಪ್ಪಿದಲ್ಲಿ, ಅಥವಾ

(ಸಿ) ಘೋಷಿಸಬೇಕಾಗಿದ್ದ ಯಾವುದೇ ತೆರಿಗೆ ಅಥವಾ ಬಡ್ಡಿಯನ್ನು ಘೋಷಿಸಲು ತಪ್ಪಿದಲ್ಲಿ, ಅಥವಾ

(ಡಿ) ವಿವರ ಪಟ್ಟಿಯನ್ನು ಸಲ್ಲಿಸಲು ತಪ್ಪಿದಲ್ಲಿ,

- ಅಂಥ ವ್ಯಾಪಾರಿಯು, ತಾನು ಘೋಷಿಸಿದ್ದ ತೆರಿಗೆ ಮತ್ತು ಹೆಚ್ಚುವರಿ ತೆರಿಗೆ ಅಥವಾ (1)ನೇ ಉಪಪ್ರಕರಣದ ಅಡಿಯಲ್ಲಿ ಸಂದಾಯಮಾಡಬೇಕಾದ ತೆರಿಗೆ ಮತ್ತು ಸಂದಾಯಮಾಡಬೇಕಾದ ಬಡ್ಡಿಯ ಸಂಬಂಧದಲ್ಲಿ ಅವನು ವಿವರಪಟ್ಟಿಯನ್ನು ಒದಗಿಸಲು ತಪ್ಪಿದ ಅವಧಿಗಾಗಿ ಬಡ್ಡಿಯನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು.

(3) ಈ ಅಧಿನಿಯಮದ ಅಡಿಯಲ್ಲಿ ಸಂದಾಯಮಾಡಬೇಕಾಗಿದ್ದ ಯಾವುದೇ ಇತರ ಮೊಬಲಗನ್ನು 8ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಸಂದಾಯ ಮಾಡದಿದ್ದಲ್ಲಿ, ಅಂಥ ಅವಧಿಗಾಗಿ ಅಂಥ ಮೊಬಲಗಿನ ಮೇಲೆ ಬಡ್ಡಿಯನ್ನು ಸಂದಾಯ ಮಾಡತಕ್ಕದ್ದು.

(4) ಅಂಥ ತೆರಿಗೆ ಅಥವಾ ಮೊಬಲಗಿನ ಬಗ್ಗೆ ವಿವಾದಿಸುವ ಯಾವುದೇ ಅಪೀಲಿನಲ್ಲಿ ಅಥವಾ ಇತರ ವ್ಯವಹರಣೆಗಳಲ್ಲಿ ಯಾವುದೇ ಪ್ರಾಧಿಕಾರದ ಅಥವಾ ನ್ಯಾಯಾಲಯದ ಆದೇಶದ ಮೂಲಕ, ಈ ಅಧಿನಿಯಮದ ಅಡಿಯಲ್ಲಿ ಸಂದಾಯ ಮಾಡಬೇಕಾಗಿದ್ದ ಯಾವುದೇ ತೆರಿಗೆಯ ಅಥವಾ

ಇತರ ಮೊಬಲಗಿನ ವಸೂಲಿಯನ್ನು ಯಾವ ಅವಧಿಯಲ್ಲಿ ತಡೆಹಿಡಿಯಲಾಗಿದೆಯೋ ಆ ಯಾವುದೇ ಅವಧಿಯಲ್ಲಿ ಈ ಪ್ರಕರಣದ ಅಡಿಯಲ್ಲಿ ಬಡ್ಡಿಯನ್ನು ಸಹ ಸಂದಾಯ ಮಾಡತಕ್ಕದ್ದು."

(3) 5–ಸಿ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**5–ಸಿ. ಬಡ್ಡಿಯ ದರ.**– (1) ಈ ಮುಂದಿನ ಸಂದರ್ಭಗಳಲ್ಲಿ 5–ಬಿ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾದ ಸರಳ ಬಡ್ಡಿಯ ದರವು,–

(ಎ) ತೆರಿಗೆಯನ್ನು ಸಂದಾಯಮಾಡಬೇಕಾಗಿದ್ದ ದಿನಾಂಕದಿಂದ ಅದನ್ನು ಸಂದಾಯ ಮಾಡುವ ದಿನಾಂಕದವರೆಗೆ ಅಥವಾ ಈ ಅಧಿನಿಯಮದ ಅಡಿಯಲ್ಲಿ ಯಾವುದೇ ತೆರಿಗೆ ನಿರ್ಧರಣೆಯ ದಿನಾಂಕದವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ; ಮತ್ತು

(ಬಿ) ಈ ಅಧಿನಿಯಮದ ಅಡಿಯಲ್ಲಿ ಸಂದಾಯ ಮಾಡಬೇಕಾದ ಯಾವುದೇ ಮೊಬಲಗು ಯಾವ ದಿನಾಂಕದಿಂದ ಬಾಕಿ ಉಳಿದಿತ್ತೋ ಆ ದಿನಾಂಕದಿಂದ,

–ತಿಂಗಳಿಗೆ ಶೇಕಡಾ ಒಂದೂವರೆ ಆಗಿರತಕ್ಕದ್ದು.

(2) ಈ ಪ್ರಕರಣದ ಉದ್ದೇಶಕ್ಕಾಗಿ, ಒಂದು ತಿಂಗಳಿನ ಭಾಗಗಳ ಸಂಬಂಧದಲ್ಲಿ ಬಡ್ಡಿಯನ್ನು ದಾಮಾಷಾ ಪ್ರಮಾಣದಲ್ಲಿ ಲೆಕ್ಕಹಾಕತಕ್ಕದ್ದು ಮತ್ತು ತಿಂಗಳು ಎಂದರೆ, ಮೂವತ್ತು ದಿನಗಳ ಯಾವುದೇ ಅವಧಿ ಆಗಿರತಕ್ಕದ್ದು.

**5–ಡಿ. ತೆರಿಗೆಯ ನಿರ್ಧರಣೆ.**– (1) ವ್ಯಾಪಾರಿಯು, ಯಾವುದೇ ಅವಧಿಗಾಗಿ ಸಲ್ಲಿಸಿದ ವಿವರ ಪಟ್ಟಿಯ ಸಮರ್ಥನೆಗಾಗಿ ತೆರಿಗೆ ನಿರ್ಧರಣೆ ಪ್ರಾಧಿಕಾರದ ಮುಂದೆ ಲೆಕ್ಕಪತ್ರಗಳನ್ನು ಹಾಜರುಪಡಿಸಬೇಕಾಗಿದೆ ಎಂಬುದಾಗಿ ಆಯುಕ್ತನು ಅಧಿಸೂಚಿಸಬಹುದಾದ ಪ್ರಕರಣಗಳಲ್ಲಿ ಹೊರತು, 5ನೇ ಪ್ರಕರಣದ ಅಡಿಯಲ್ಲಿ ವ್ಯಾಪಾರಿಯು ಸಲ್ಲಿಸಿದ ವಿವರ ಪಟ್ಟಿಯ ಆಧಾರದ ಮೇಲೆ ಆತನ ತೆರಿಗೆಯನ್ನು ನಿರ್ಧರಿಸಲಾಗಿರುವುದಾಗಿ ಭಾವಿಸತಕ್ಕದ್ದು ಮತ್ತು ಲೆಕ್ಕಪತ್ರ ಹಾಜರುಪಡಿಸಿದ ಸಂದರ್ಭದಲ್ಲಿ ನಿಯಮಿಸಲಾದ ಪ್ರಾಧಿಕಾರವು–

(ಎ) ಸಲ್ಲಿಸಿದ ವಿವರಪಟ್ಟಿಯು ಸರಿಯಾಗಿದೆ ಮತ್ತು ಸಂಪೂರ್ಣವಾಗಿದೆ ಎಂದು ಮನಗಂಡಲ್ಲಿ ಸಲ್ಲಿಸಿದ ವಿವರಪಟ್ಟಿಯ ಆಧಾರದ ಮೇಲೆ ಅಂಥ ವ್ಯಾಪಾರಿಯ,– ತೆರಿಗೆ ನಿರ್ಧರಣೆಗೆ ಮುಂದುವರೆಯತಕ್ಕದ್ದು, ಅಥವಾ

(ಬಿ) ಸಲ್ಲಿಸಿದ ವಿವರ ಪಟ್ಟಿಯು ಸರಿಯಾಗಿಲ್ಲವೆಂದು ಅಥವಾ ಪೂರ್ಣವಾಗಿಲ್ಲವೆಂದು ಕಂಡುಬಂದಲ್ಲಿ, ತನ್ನ ಅತ್ಯುತ್ತಮ ವಿವೇಚನೆಯಲ್ಲಿ ತೆರಿಗೆ ನಿರ್ಧರಣೆಯನ್ನು, ಅಂಥ ನಿರ್ಧರಣೆ ವಿರುದ್ಧ ಬರಹದಲ್ಲಿ ಕಾರಣವನ್ನು ತೋರಿಸಲು ಅಂಥ ವ್ಯಾಪಾರಿಗೆ ಅವಕಾಶವನ್ನು ನೀಡಿದ ಮೇಲೆ, ಮಾಡಲು ಮುಂದುವರಿಯತಕ್ಕದ್ದು ಮತ್ತು ಅದರಲ್ಲಿ ಯಾವುದೇ ಹೆಚ್ಚುವರಿ ನಿರ್ಧರಣೆಯಾದ ತೆರಿಗೆಯನ್ನು ಅಂಥ ನಿರ್ಧರಣೆಯನ್ನು ವ್ಯಾಪಾರಿಗೆ ಜಾರಿಮಾಡಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ವ್ಯಾಪಾರಿಯು ಸಂದಾಯಿಸತಕ್ಕದ್ದು.

(2) ನೋಂದಾಯಿತ ವ್ಯಾಪಾರಿಯು, ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ಮಾಡಿದ ನಿಯಮಗಳ ಅಡಿಯಲ್ಲಿ ಉಪಬಂಧಿಸಲಾದ ದಿನಾಂಕದಂದು ಅಥವಾ ದಿನಾಂಕಕ್ಕೆ ಮೊದಲು ತನ್ನ ವಿವರ ಪಟ್ಟಿಯನ್ನು ಒದಗಿಸಲು ತಪ್ಪಿದಲ್ಲಿ, ತೆರಿಗೆ ನಿರ್ಧರಣೆ ಪ್ರಾಧಿಕಾರವು ನೋಂದಾಯಿತ ವ್ಯಾಪಾರಿಗೆ, ತನ್ನ ಅತ್ಯುತ್ತಮ ವಿವೇಚನೆಯಂತೆ ತೆರಿಗೆ ನಿರ್ಧರಣೆಯನ್ನು ಮಾಡತಕ್ಕದ್ದು ಮತ್ತು ವ್ಯಾಪಾರಿಗೆ ಅಂಥ ತೆರಿಗೆ ನಿರ್ಧರಣೆಯನ್ನು ಜಾರಿಮಾಡಿದ ದಿನಾಂಕದಿಂದ ಹತ್ತು ದಿನಗಳೊಳಗೆ ನಿರ್ಧರಣೆ ಮಾಡಿದ ತೆರಿಗೆಯನ್ನು ಸಂದಾಯ ಮಾಡತಕ್ಕದ್ದು.

(3) ಮೇಲಿನ (2)ನೇ ಉಪಪ್ರಕರಣದ ಅಡಿಯಲ್ಲಿ ತೆರಿಗೆ ನಿರ್ಧರಣೆಯನ್ನು ಮಾಡಿದಲ್ಲಿ ಮತ್ತು ತೆರಿಗೆ ನಿರ್ಧರಣೆಗೆ ಸಂಬಂಧಿಸಿದ ಅವಧಿಗಾಗಿ ವಿವರ ಪಟ್ಟಿಯನ್ನು ವ್ಯಾಪಾರಿಯು ತರುವಾಯ ನೀಡಿದಲ್ಲಿ, ತೆರಿಗೆ ನಿರ್ಧರಣೆ ಪ್ರಾಧಿಕಾರವು, ತೆರಿಗೆ ನಿರ್ಧರಣೆಯನ್ನು ಹಿಂದಕ್ಕೆ ಪಡೆಯಬಹುದು. ಆದರೆ, ವ್ಯಾಪಾರಿಯು, ಅನ್ವಯಿಸಬಹುದಾದ ದಂಡಗಳು ಮತ್ತು ಬಡ್ಡಿಯನ್ನು ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು.

(4) ಮೇಲಿನ (3)ನೇ ಉಪಪ್ರಕರಣದ ಅಡಿಯಲ್ಲಿ ಒಂದು ವಿವರ ಪಟ್ಟಿಯನ್ನು ವ್ಯಾಪಾರಿಯು ನೀಡಿದಲ್ಲಿ, ಅಂಥ ವಿವರ ಪಟ್ಟಿಯನ್ನು ವ್ಯಾಪಾರಿಗೆ ಅಂಥ ತೆರಿಗೆ ನಿರ್ಧರಣೆಯನ್ನು ಜಾರಿಮಾಡಿದ ಒಂದು ತಿಂಗಳೊಳಗೆ ಒದಗಿಸತಕ್ಕದ್ದು.

(5) (ಎ) ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿತನಾದ ಒಬ್ಬ ವ್ಯಾಪಾರಿಯ ಅಥವಾ ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿತನಾಗಲು ಬದ್ಧನಾದ ವ್ಯಾಪಾರಿಯ ಸಂಬಂಧದಲ್ಲಿ, ತೆರಿಗೆ ನಿರ್ಧರಣೆ ಪ್ರಾಧಿಕಾರವು, ತೆರಿಗೆಗೆ ಬದ್ಧನಾಗಿರುವನೆಂದು ತೋರಿಸುವ ಯಾವುದೇ ಸಾಕ್ಷ್ಯವು ತನ್ನ ಗಮನಕ್ಕೆ ಬಂದ ಮೇಲೆ, ತನ್ನ ಜಂಟಿ ಆಯುಕ್ತನ ಅಥವಾ ಅಪರ ಆಯುಕ್ತನ ಪೂರ್ವಾನುಮತಿಯೊಡನೆ ಅಂಥ ವ್ಯಾಪಾರಿಯು, ಹಾಗೆ ನಿರ್ಧರಿಸಲಾದ ಅಥವಾ ವಿಧಿಸಲಾದ ಅಥವಾ ಸಂದಾಯಮಾಡತಕ್ಕ ಯಾವುದೇ ತೆರಿಗೆ, ದಂಡ ಅಥವಾ ಬಡ್ಡಿಯನ್ನು ಸಂದಾಯ ಮಾಡಲು ತಪ್ಪುವನೆಂದು ನಂಬಲು ಕಾರಣ ಇದೆ ಎಂದು ತೆರಿಗೆ ನಿರ್ಧರಣೆ ಪ್ರಾಧಿಕಾರವು ಅಭಿಪ್ರಾಯಪಟ್ಟರೆ ಆ ವ್ಯಾಪಾರಿಗೆ ರಕ್ಷಣಾತ್ಮಕ ತೆರಿಗೆ ನಿರ್ಧರಣೆಯನ್ನು ಮಾಡಬಹುದು. ಹಾಗೂ ಅಂಥ ತೆರಿಗೆ, ದಂಡ ಅಥವಾ ಬಡ್ಡಿಯನ್ನು ಕೂಡಲೇ ಸಂದಾಯ ಮಾಡತಕ್ಕದ್ದು.

(ಬಿ) ಜಂಟಿ ಆಯುಕ್ತ ಅಥವಾ ಅಪರ ಆಯುಕ್ತನು, ವ್ಯಾಪಾರಿಯು ಅಂಥ ರಕ್ಷಣಾತ್ಮಕ ತೆರಿಗೆಯನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಸಲ್ಲಿಸಿದ ಯಾವುದೇ ಅರ್ಜಿಯ ಮೇಲೆ ಅಥವಾ ಅಂಥ ರಕ್ಷಣಾತ್ಮಕ ತೆರಿಗೆನಿರ್ಧರಣೆಯನ್ನು ನೀಡಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ತಾನಾಗಿಯೇ ನೀಡಲಾದ ಯಾವುದೇ ರಕ್ಷಣಾತ್ಮಕ ತೆರಿಗೆ ನಿರ್ಧರಣೆಯು ತಪ್ಪು ಎಂದು ಪರಿಗಣಿಸಿದರೆ, ಸಂಬಂಧಪಟ್ಟ ವ್ಯಾಪಾರಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡಿದ ತರುವಾಯ ಮತ್ತು ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ತರುವಾಯ ಪ್ರಕರಣದ ಸನ್ನಿವೇಶಕ್ಕೆ ನ್ಯಾಯೋಚಿತವಾದಂಥ ಆದೇಶವನ್ನು ಹೊರಡಿಸತಕ್ಕದ್ದು.

(6) ಈ ಬಗ್ಗೆ ಆಯುಕ್ತರು ಪ್ರಾಧಿಕಾರ ನೀಡಿದ ಪ್ರಾಧಿಕಾರಿಯು, ನಿರ್ದಿಷ್ಟಪಡಿಸಿದ ಅವಧಿಯೊಳಗೆ ನೋಂದಾಯಿತನಾಗಲು ಬದ್ಧನಾಗಿದ್ದರೂ ಹಾಗೆ ಮಾಡಲು ತಪ್ಪಿದ ವ್ಯಾಪಾರಿಯ ತೆರಿಗೆ ನಿರ್ಧರಣೆಯನ್ನು, ಆ ವ್ಯಾಪಾರಿಯು ನೋಂದಾಯಿತನಾಗಿದ್ದರೆ ಯಾವ ತೆರಿಗೆ ಅವಧಿ ಅಥವಾ ಅವಧಿಗಳು ಅವನಿಗೆ ಅನ್ವಯಿಸುತ್ತವೆಯೋ ಅವುಗಳ ಬಗ್ಗೆ ತನ್ನ ಉತ್ತಮ ವಿವೇಚನೆಯ ಅನುಸಾರ ಮತ್ತು ಅಂಥ ತೆರಿಗೆ ನಿರ್ಧರಣೆಯ ವಿರುದ್ಧ ಕಾರಣಗಳನ್ನು ಬರಹದಲ್ಲಿ ತೋರಿಸಲು ಆ ವ್ಯಾಪಾರಿಗೆ ಅವಕಾಶವನ್ನು ಕೊಟ್ಟ ನಂತರ ಮಾಡತಕ್ಕದ್ದು. ಸದರಿ ತೆರಿಗೆ ನಿರ್ಧರಣೆಯನ್ನು ಆ ವ್ಯಾಪಾರಿಯ ಮೇಲೆ ಜಾರಿ

ಮಾಡಿದ ದಿನಾಂಕದಿಂದ ಹತ್ತು ದಿನಗಳೊಳಗೆ ನಿರ್ಧರಿಸಿದ ತೆರಿಗೆ ಹಾಗೂ ಯಾವುದಾದರೂ ಬಡ್ಡಿ ಸಂದಾಯವಾಗಬೇಕಿದ್ದರೆ ಅದನ್ನು ವ್ಯಾಪಾರಿಯು ಸಂದಾಯ ಮಾಡತಕ್ಕದ್ದು."

(4) 6ನೇ ಉಪಪ್ರಕರಣಕ್ಕೆ ಈ ಮುಂದಿದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"**6. ತೆರಿಗೆಯ ಮರುನಿರ್ಧರಣೆ.**- (1) ತೆರಿಗೆ ನಿರ್ಧರಣೆ ಮಾಡಲಾಗಿದೆಯೆಂದು ಭಾವಿಸಲಾದ, ಸಂದರ್ಭದಲ್ಲಿ ನೀಡಿದ ಯಾವುದೇ ವಿವರ ಪಟ್ಟಿಯು ಅಥವಾ 5-ಬಿ ಪ್ರಕರಣದ ಅಡಿಯಲ್ಲಿ ನೀಡಿದ ಯಾವುದೇ ತೆರಿಗೆ ನಿರ್ಧರಣೆಯು, ವ್ಯಾಪಾರಿಯ ಸರಿಯಾದ ತೆರಿಗೆ ಹೊಣೆಗಾರಿಕೆಯನ್ನು ಕಡಿಮೆ ನಿರೂಪಿಸಿದೆ ಎಂದು ತೆರಿಗೆ ನಿರ್ಧರಣೆ ಪ್ರಾಧಿಕಾರವು ನಂಬಲು ಕಾರಣಗಳಿದ್ದಲ್ಲಿ, ಅದು,-

(ಎ) ಲಭ್ಯವಿರುವ ಯಾವುದೇ ಮಾಹಿತಿಯ ಆಧಾರದ ಮೇಲೆ, ತನ್ನ ಅತ್ಯುತ್ತಮ ವಿವೇಚನೆಯಲ್ಲಿ, ಸಂದಾಯ ಮಾಡಬೇಕಾದ ಹೆಚ್ಚುವರಿ ತೆರಿಗೆಯ ಮರುನಿರ್ಧರಣೆ ಮಾಡಬಹುದು ಮತ್ತು 20-ಬಿ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಯಾವುದೇ ದಂಡವನ್ನು ಸಹ ವಿಧಿಸಬಹುದು ಹಾಗೂ ಯಾವುದೇ ಬಡ್ಡಿಯ ಸಂದಾಯಕ್ಕಾಗಿ ಒತ್ತಾಯಿಸಬಹುದು; ಮತ್ತು

(ಬಿ) ಲಿಖಿತದಲ್ಲಿ ಅಂಥ ಮರು ನಿರ್ಧರಣೆಗೆ ಪ್ರತಿಯಾಗಿ ಕಾರಣ ತೋರಿಸಲು ವ್ಯಾಪಾರಿಗೆ ಅವಕಾಶ ನೀಡಿದ ತರುವಾಯ, ನೋಟೀಸನ್ನು ಜಾರಿಗೊಳಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ತೆರಿಗೆಯನ್ನು ಸಂದಾಯ ಮಾಡತಕ್ಕದ್ದೆಂದು ಕೋರಿ ವ್ಯಾಪಾರಿಗೆ ಮರು ನಿರ್ಧರಣೆಯ ಒಂದು ನೋಟೀಸನ್ನು ನೀಡತಕ್ಕದ್ದು.

(2) ಈ ಪ್ರಕರಣದ ಅಡಿಯಲ್ಲಿ ಮರುನಿರ್ಧರಣೆಯನ್ನು ಮಾಡಿದ ತರುವಾಯದಲ್ಲಿ,-

(ಎ) ತೆರಿಗೆ ನಿರ್ಧರಣೆ ಪ್ರಾಧಿಕಾರದ ಗಮನಕ್ಕೆ ಯಾವುದೇ ಮತ್ತಷ್ಟು ಸಾಕ್ಷ್ಯವು ಕಂಡುಬಂದಲ್ಲಿ; ಅಥವಾ

(ಬಿ) ತೆರಿಗೆ ನಿರ್ಧರಣೆ ಪ್ರಾಧಿಕಾರಕ್ಕೆ, ವ್ಯಾಪಾರಿಯು ಅವನದೇ ಲೆಕ್ಕದಲ್ಲಾಗಲೀ ಅಥವಾ ಅವನ ಪ್ರಿನ್ಸಿಪಾಲನ ಲೆಕ್ಕದಲ್ಲಾಗಲೀ ಅಥವಾ ಸ್ಥಳೀಯ ಪ್ರದೇಶದೊಳಗೆ ತರಲಾಗುವ ಅಥವಾ ತರುವಂತೆ ಮಾಡುವ ತೆರಿಗೆ ಪಾವತಿಸಬೇಕಾದ ಸರಕುಗಳ ಮೌಲ್ಯದ ಅಥವಾ ಸರಕುಗಳನ್ನು ಪಡೆದುಕೊಂಡಿರುವ ಅಥವಾ ಯಾವುದೇ ತೆರಿಗೆ ಅವಧಿಯ ಸಂಬಂಧದಲ್ಲಿ ಸ್ಥಳೀಯ ಪ್ರದೇಶದೊಳಗೆ ಪ್ರವೇಶಿಸಿದ ಮೇಲಿನ ಅಂಥ ಸರಕುಗಳನ್ನು ಪಡೆದುಕೊಳ್ಳಲು ಅರ್ಹರಾಗಿರುವ ಯಾವೊಬ್ಬ ಇತರ ವ್ಯಕ್ತಿಯ, ವಹಿವಾಟಿನ ಪೂರ್ಣ ಅಥವಾ ಭಾಗವು, ತೆರಿಗೆ ಮರುನಿರ್ಧರಣೆಯಿಂದ ತಪ್ಪಿಸಿಕೊಂಡಿದೆಯೆಂದು; ಅಥವಾ

(ಸಿ) ಮರು ನಿರ್ಧರಣೆಯ ಅಡಿಯಲ್ಲಿರುವ ತೆರಿಗೆಯೆಂದು; ಅಥವಾ

(ಡಿ) ಈ ಅಧಿನಿಯಮದ ಅಡಿಯಲ್ಲಿ ತೆರಿಗೆ ನಿರ್ಧರಣೆ ಮಾಡಬೇಕಾದ ದರಕ್ಕಿಂತ ಕಡಿಮೆ ದರದಲ್ಲಿ ಮರು ನಿರ್ಧರಣೆಯಾಗಿದೆಯೆಂದು;

(ಇ) ಅದರ ಸಂಬಂಧದಲ್ಲಿ ಯಾವುದೇ ಕಡಿತಗಳು ಅಥವಾ ವಿನಾಯತಿಗಳನ್ನು ತಪ್ಪಾಗಿ ಅನುಮತಿಸಲಾಗಿದೆಯೆಂದು,

- ಅಂಥ ತಪ್ಪಿಸಿಕೊಂಡ ವಹಿವಾಟಿನ ಪೂರ್ಣ ಅಥವಾ ಭಾಗದ ಅಥವಾ ಸಂದರ್ಭಾನುಸಾರವಾಗಿ ತೆರಿಗೆ ಪಾವತಿಸಬೇಕಾದ ಸರಕುಗಳ ಮೌಲ್ಯ, ತೆರಿಗೆ ನಿರ್ಧರಣೆ ಅಥವಾ ಮರು ನಿರ್ಧರಣೆಯ ಸಮಯದಲ್ಲಿ ಸದರಿ ಪ್ರಾಧಿಕಾರದ ಮುಂದೆ ಈಗಾಗಲೇ ಇದೆಯೆಂಬ ವಾಸ್ತವಾಂಶಗಳಿದ್ದರೂ, ತೆರಿಗೆ ನಿರ್ಧರಣೆ ಪ್ರಾಧಿಕಾರವು, ಅಂಥ ಹಿಂದಿನ ತೆರಿಗೆ ನಿರ್ಧರಣೆ ಅಥವಾ ಮರುನಿರ್ಧರಣೆಗೆ ಹೆಚ್ಚುವರಿಯಾಗಿ ತೆರಿಗೆ ನಿರ್ಧರಣೆ ಅಥವಾ ಯಾವುದೇ ಮತ್ತಷ್ಟು ಮರುನಿರ್ಧರಣೆಗಳನ್ನು ಮಾಡಲು ಮುಂದುವರಿಯಬಹುದು."

(5) 7ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"**7. ತೆರಿಗೆ ನಿರ್ಧರಣೆ ಮತ್ತು ಮರು ನಿರ್ಧರಣೆಗಾಗಿ ಕಾಲಮಿತಿ.**- (1) ಯಾವುದೇ ನಿಯಮಿಸಲಾದ ತೆರಿಗೆ ಅವಧಿಗಾಗಿ ಬಾಕಿ ತೆರಿಗೆಯ ಮೊಬಲಗಿನ ಸಂಬಂಧದಲ್ಲಿ 5-ಡಿ ಪ್ರಕರಣದ ಅಡಿಯಲ್ಲಿ ತೆರಿಗೆ ನಿರ್ಧರಣೆಯನ್ನು ಅಥವಾ 6ನೇ ಪ್ರಕರಣದ ಅಡಿಯಲ್ಲಿ ತೆರಿಗೆಯ ಮರು ನಿರ್ಧರಣೆಯನ್ನು, ನಿಯಮಿಸಲಾದ ತೆರಿಗೆ ಅವಧಿಯ ಮುಕ್ತಾಯದ ತರುವಾಯ ಐದು ವರ್ಷಗಳ ನಂತರ ಮಾಡತಕ್ಕದ್ದಲ್ಲ:

ಪರಂತು, 2014ರ ಮಾರ್ಚ್ 31ಕ್ಕೆ ಕೊನೆಗೊಳ್ಳುವವರೆಗಿನ ಅವಧಿಯವರೆಗಿನ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆ ಅಥವಾ ತೆರಿಗೆ ಮರು ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಮುಕ್ತಾಯವಾದ ತರುವಾಯ ಎಂಟು ವರ್ಷಗಳ ಅವಧಿಯೊಳಗೆ ಮಾಡತಕ್ಕದ್ದು:

(2) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ನೋಂದಾಯಿತನಾಗಲು ಬದ್ಧನಾಗಿದ್ದಾಗ್ಯೂ ಹಾಗೆ ಮಾಡಲು ತಪ್ಪಿದ ಒಬ್ಬ ವ್ಯಾಪಾರಿಯು ಯಾವುದೇ ತೆರಿಗೆಯನ್ನು ಸಂದಾಯ ಮಾಡದಿದ್ದಲ್ಲಿ ಅಥವಾ ತೆರಿಗೆಯನ್ನು ಮೋಸದಿಂದ ವಂಚಿಸಿ 21ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಶಿಕ್ಷೆಗೆ ಗುರಿಯಾಗುವ ಯಾವುದೇ ವ್ಯಾಪಾರಿಯ ಸಂದರ್ಭದಲ್ಲಿ, ನಿಯಮಿಸಲಾದ ತೆರಿಗೆ ಅವಧಿಯ ಮುಕ್ತಾಯದಿಂದ ಎಂಟು ವರ್ಷಗಳ ಅವಧಿಯೊಳಗೆ ತೆರಿಗೆ ನಿರ್ಧರಣೆಯನ್ನು ಮಾಡಬಹುದು ಅಥವಾ ಮರು ನಿರ್ಧರಣೆಯನ್ನು ಮಾಡಬಹುದು:

ಪರಂತು, 2014ರ ಮಾರ್ಚ್ 31ನೇ ದಿನಾಂಕಕ್ಕೆ ಕೊನೆಗೊಳ್ಳುವ ಅವಧಿಯವರೆಗೆ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆ ಅಥವಾ ತೆರಿಗೆಯ ಮರು ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಕೊನೆಗೊಂಡ ತರುವಾಯ ಹತ್ತು ವರ್ಷಗಳ ಅವಧಿಯೊಳಗೆ ಈ ಉಪಪ್ರಕರಣದಡಿಯಲ್ಲಿ ಮಾಡತಕ್ಕದ್ದು.

(3) ಈ ಅಧಿನಿಯಮದ ಅಡಿಯಲ್ಲಿ ತೆರಿಗೆ ನಿರ್ಧರಣೆಗಾಗಿ ಅಥವಾ ಸಂದರ್ಭಾನುಸಾರ ತೆರಿಗೆಯ ಮರು ನಿರ್ಧರಣೆಗಾಗಿ ನಿರ್ದಿಷ್ಟಪಡಿಸಿದ ಕಾಲಪರಿಮಿತಿಯ ಅವಧಿಯನ್ನು ಲೆಕ್ಕಹಾಕುವಾಗ, ತೆರಿಗೆ ನಿರ್ಧರಣೆಯ ಅಥವಾ ಇತರ ವ್ಯವಹರಣೆಯ ವಿರುದ್ಧದ ಯಾವುದೇ ಅಪೀಲಿನ ವಿಲೆಗಾಗಿ ಅಪೀಲು ಪ್ರಾಧಿಕಾರ, ನ್ಯಾಯಾಧಿಕರಣ ಅಥವಾ ಸಕ್ಷಮ ನ್ಯಾಯಾಲಯವು ತೆಗೆದುಕೊಂಡ ಅವಧಿಯನ್ನು ತೆರಿಗೆ ನಿರ್ಧರಣೆ ಅಥವಾ ಸಂದರ್ಭಾನುಸಾರ ತೆರಿಗೆಯ ಮರುನಿರ್ಧರಣೆಗಾಗಿನ ಅಂಥ ಅವಧಿಯನ್ನು ಗಣನೆಗೆ ತೆಗೆದುಕೊಳ್ಳುವಲ್ಲಿ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

ಪರಂತು, ಈ ಪ್ರಕರಣದಲ್ಲಿರುವುದಾವುದೂ, ಕೈಗೊಳ್ಳಬಹುದಾದ ಯಾವುದೇ ಕ್ರಮ ಅಥವಾ ಮಾಡಬಹುದಾದ ಯಾವುದೇ ಆದೇಶ, ತೆರಿಗೆ ನಿರ್ಧರಣೆ ಅಥವಾ ಮರು ತೆರಿಗೆನಿರ್ಧರಣೆಯು, 13, 14, 15, 15–ಎ ಅಥವಾ 16ನೇ ಪ್ರಕರಣಗಳ ಮೇರೆಗೆ ಮಾಡಲಾದ ಯಾವುದೇ ನಿರ್ಣಯ, ಅಥವಾ ಸರ್ವೋಚ್ಚ ನ್ಯಾಯಾಲಯ, ಉಚ್ಚ ನ್ಯಾಯಾಲಯ ಅಥವಾ ಯಾವುದೇ ಇತರ ನ್ಯಾಯಲಯ ಮಾಡಿದ ಯಾವುದೇ ತೀರ್ಪು ಅಥವಾ ಆದೇಶದ ಪರಿಣಾಮವಾಗಿ, ವ್ಯಾಪಾರಿ ಅಥವಾ ಯಾವೊಬ್ಬ ವ್ಯಕ್ತಿಯ ಸಂಬಂಧದಲ್ಲಿ ಮಾಡಲಾದ ತೆರಿಗೆನಿರ್ಧರಣೆ ಅಥವಾ ಮರುತೆರಿಗೆನಿರ್ಧರಣೆಗೆ ಅನ್ವಯವಾಗತಕ್ಕದ್ದು."

(6) 8ನೇ ಪ್ರಕರಣದಲ್ಲಿ,–

(i) ಶೀರ್ಷಿಕೆಯಲ್ಲಿ "ತೆರಿಗೆ" ಎಂಬ ಪದಗಳಿಗೆ "ತೆರಿಗೆ, ದಂಡಗಳು, ಬಡ್ಡಿ ಮತ್ತು ಇತರ ಮೊಬಲಗುಗಳ" ಎಂಬ ಪದಗಳು ಮತ್ತು ಅರ್ಧ ವಿರಾಮ ಚಿಹ್ನೆಗಳನ್ನು ಪ್ರತಿಯೋಜಿಸತಕ್ಕದ್ದು.

(ii) (1)ನೇ ಉಪಪ್ರಕರಣಕ್ಕೆ ಪರಂತುಕವನ್ನು ಹೊರತುಪಡಿಸಿ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು, ತೆರಿಗೆ ನಿರ್ಧರಣೆ ಪ್ರಾಧಿಕಾರ ಅಥವಾ ನಿಯಮಿಸಲಾದ ಪ್ರಾಧಿಕಾರಕ್ಕೆ ವಿವರ ಪಟ್ಟಿಗಳನ್ನು ಸಲ್ಲಿಸತಕ್ಕದ್ದು ಮತ್ತು ಸಂದಾಯ ಮಾಡಬೇಕಾದ ತೆರಿಗೆಯನ್ನು ಅಥವಾ ಬಾಕಿಯಿರುವ ಯಾವುದೇ ದಂಡ ಅಥವಾ ಬಡ್ಡಿಯನ್ನು ನಿರ್ದಿಷ್ಟಪಡಿಸಿದ ಅವಧಿಯೊಳಗೆ ನಿಯಮಿಸಬಹುದಾದಂಥ ರೀತಿಯಲ್ಲಿ ಸಂದಾಯ ಮಾಡತಕ್ಕದ್ದು ಮತ್ತು ವ್ಯಾಪಾರಿಯು ಸಲ್ಲಿಸಿದ ಅರ್ಜಿಯ ಮೇಲೆ, ನಿಯಮಿಸಬಹುದಾದಂತೆ ಅಂಥ ಕಂತುಗಳಲ್ಲಿ ಮತ್ತು ಅಂಥ ಅಂತರಗಳಲ್ಲಿ ತೆರಿಗೆಯ ಅಥವಾ ಸಂದಾಯ ಮಾಡಬೇಕಾದ ಯಾವುದೇ ಮೊಬಲಗಿನ ಸಂದಾಯವನ್ನು ನಿಯಮಿಸಬಹುದಾದಂತೆ ಅಂಥ ಷರತ್ತುಗಳಿಗೆ ಒಳಪಟ್ಟು ಸರ್ಕಾರ ಅಥವಾ ಆಯುಕ್ತನು ಅನುಮತಿಸಬಹುದು."

(iii) ಹಾಗೆ ಪ್ರತಿಯೋಜಿಸಲಾದ (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(1–ಎ) ಸಂದಾಯ ಮಾಡಿದ ಮೊಬಲಗು, ತೆರಿಗೆಯ ಅಥವಾ ಬಾಕಿ ಇರುವ ಯಾವುದೇ ಮೊಬಲಗಿನ ಮತ್ತು ಸಂದಾಯ ಮಾಡಬೇಕಾದ ಬಡ್ಡಿಯ ಒಟ್ಟಾರೆ ಮೊಬಲಗಿಗಿಂತ ಕಡಿಮೆಯಾಗಿದ್ದಲ್ಲಿ ಹಾಗೆ ಸಂದಾಯ ಮಾಡಲಾದ ಮೊಬಲಗನ್ನು ಸಂದಾಯ ಮಾಡಬೇಕಾದ ಬಡ್ಡಿಗೆ ಮೊದಲು ಹೊಂದಾಣಿಕೆ ಮಾಡತಕ್ಕದ್ದು ಮತ್ತು ಬಾಕಿ ಯಾವುದಾದರೂ ಉಳಿದಲ್ಲಿ ಅದನ್ನು ತೆರಿಗೆ ಅಥವಾ ಇತರ ಯಾವುದೇ ಬಾಕಿ ಇರುವ ಮೊಬಲಗಿಗೆ ಹೊಂದಾಣಿಕೆ ಮಾಡತಕ್ಕದ್ದು.

(1–ಬಿ) ಒಬ್ಬ ನೋಂದಾಯಿತ ವ್ಯಾಪಾರಿಯು, ಈ ಅಧಿನಿಯಮಕ್ಕೆ ಅನುಸಾರವಾಗಿ ಒಂದು ಪರಿಷ್ಕೃತ ವಿವರ ಪಟ್ಟಿಯನ್ನು ಒದಗಿಸಿದ್ದು, ಅದು ಮೂಲ ವಿವರ ಪಟ್ಟಿಗೆ ಅನುಸಾರವಾಗಿ ಸಂದಾಯ ಮಾಡಿದ ಅಥವಾ ಸಂದಾಯ ಮಾಡಬೇಕಾದ ಬಾಕಿ ಮೊಬಲಗಿಗಿಂತ ಹೆಚ್ಚಿನ ತೆರಿಗೆ ಮೊಬಲಗನ್ನು ತೋರಿಸುತ್ತಿದ್ದಲ್ಲಿ, ಆ ಪರಿಷ್ಕೃತ ವಿವರ ಪಟ್ಟಿಯೊಂದಿಗೆ ನಿಯಮಿಸಬಹುದಾದಂತೆ ಅಂಥ ರೀತಿಯಲ್ಲಿ ಹಾಗೆ ಸಂದಾಯವಾಗಬೇಕಾದ ತೆರಿಗೆಯನ್ನು ಸಂದಾಯ ಮಾಡತಕ್ಕದ್ದು."

(iv) (4)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(5) ಉಚ್ಚ ನ್ಯಾಯಾಲಯವು, ತಾನಾಗಿಯೇ ಆಗಲಿ ಅಥವಾ ಆಯುಕ್ತನು ಅಥವಾ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು ಸಲ್ಲಿಸಿದ ಅರ್ಜಿಯ ಮೇಲೆ (4)ನೇ ಉಪಪ್ರಕರಣದ (ಸಿ) ಖಂಡದ ಅಡಿಯಲ್ಲಿ ಮ್ಯಾಜಿಸ್ಟ್ರೇಟನು ಮಾಡಿದ ಯಾವುದೇ ಆದೇಶವನ್ನು ಪರಿಷ್ಕರಿಸಬಹುದು."

(7) 14ನೇ ಪ್ರಕರಣದ (3)ನೇ ಉಪಪ್ರಕರಣದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಯಾವುದೇ ವರ್ಷದ ಒಂದಕ್ಕಿಂತ ಹೆಚ್ಚಿನ ತೆರಿಗೆ ಅವಧಿಯ ಸಂಬಂಧದಲ್ಲಿ, ತೆರಿಗೆ ನಿರ್ಧರಣೆ ಅಥವಾ ಮರು ನಿರ್ಧರಣೆ ಆದೇಶಗಳ ಅಥವಾ ಇತರ ಯಾವುದೇ ಆದೇಶಗಳು ಅಥವಾ ವ್ಯವಹರಣೆಗಳ ವಿರುದ್ಧ ಒಂದು ಅಪೀಲನ್ನು ಹೂಡಬಹುದು."

(8) 17ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"17. ಕಾಣಬರುವ ತಪ್ಪುಗಳ ಸರಿಪಡಿಸುವಿಕೆ ಮತ್ತು ಕೆಲವು ಸಂದರ್ಭಗಳಲ್ಲಿ ತೆರಿಗೆ ನಿರ್ಧರಣೆ ಅಥವಾ ಮರುನಿರ್ಧರಣೆಯ ಸರಿಪಡಿಸುವಿಕೆಯ ಅಧಿಕಾರ.**– (1) ದಾಖಲೆಯಿಂದ ಕಂಡುಬರುವ ಯಾವುದೇ ತಪ್ಪನ್ನು ಸರಿಪಡಿಸುವ ದೃಷ್ಟಿಯಿಂದ ನಿಯಮಿಸಲಾದ ಪ್ರಾಧಿಕಾರವು, ಅಪೀಲು ಪ್ರಾಧಿಕಾರವು ಅಥವಾ ಪುನರೀಕ್ಷಣಾ ಪ್ರಾಧಿಕಾರವು, ತಾನು ಮಾಡಿದ ಆದೇಶದ ದಿನಾಂಕದಿಂದ ಐದು ವರ್ಷಗಳೊಳಗೆ ಯಾವುದೇ ಕಾಲದಲ್ಲಿ ಅಂಥ ತಿದ್ದುಪಡಿ ಮಾಡಬಹುದು.

(2) ತೆರಿಗೆ ನಿರ್ಧರಣೆಯನ್ನು ಹೆಚ್ಚಿಸುವ ಅಥವಾ ಅನ್ಯಥಾ ಸಂಬಂಧಪಟ್ಟ ವ್ಯಕ್ತಿಯ ಬದ್ಧತೆಯನ್ನು ಹೆಚ್ಚಿಸುವ ಪರಿಣಾಮ ಉಳ್ಳಂಥ ತಿದ್ದುಪಡಿಯನ್ನು ನಿಯಮಿಸಲಾದ ಪ್ರಾಧಿಕಾರ, ಅಪೀಲು ಪ್ರಾಧಿಕಾರ ಅಥವಾ ಸಂದರ್ಭಾನುಸಾರವಾಗಿ ಪುನರೀಕ್ಷಣಾ ಪ್ರಾಧಿಕಾರವು, ಹಾಗೆ ಮಾಡುವ ತನ್ನ ಉದ್ದೇಶದ ಬಗ್ಗೆ ನೋಟೀಸನ್ನು ಸಂಬಂಧಪಟ್ಟ ವ್ಯಕ್ತಿಗೆ ಕೊಟ್ಟಿದ್ದ ಹೊರತು ಮತ್ತು ಸಂಬಂಧಪಟ್ಟ ವ್ಯಕ್ತಿಗೆ ಅಂಥ ತಿದ್ದುಪಡಿಯ ವಿರುದ್ಧ ಲಿಖಿತದಲ್ಲಿ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟಿದ್ದ ಹೊರತು ಮಾಡತಕ್ಕದ್ದಲ್ಲ.

(3) ಮೇಲಿನ (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಿದ ಆದೇಶಕ್ಕೆ ಸಂಬಂಧಪಟ್ಟಂತೆ ಅಪೀಲು ಅಥವಾ ಪುನರೀಕ್ಷಣೆಯ ರೂಪದಲ್ಲಿ ಯಾವುದೇ ವ್ಯವಹರಣೆಯಲ್ಲಿಯ ಒಂದು ಆದೇಶವನ್ನು ಪರಿಗಣಿಸಿರುವಲ್ಲಿ ಮತ್ತು ತೀರ್ಮಾನಿಸಿರುವಲ್ಲಿ ಅಂಥ ಆದೇಶವನ್ನು ಮಾಡಿದ ಪ್ರಾಧಿಕಾರವು, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದಾಗ್ಯೂ ಹಾಗೆ ಪರಿಗಣಿಸಲಾದ ಮತ್ತು ತೀರ್ಮಾನಿಸಲಾದ ವಿಷಯವನ್ನು ಹೊರತುಪಡಿಸಿ ಯಾವುದೇ ಇತರ ವಿಷಯಕ್ಕೆ ಸಂಬಂಧಪಟ್ಟಂತೆ ಆ ಉಪಪ್ರಕರಣದ ಅಡಿಯಲ್ಲಿಯ ಆದೇಶವನ್ನು ತಿದ್ದುಪಡಿ ಮಾಡಬಹುದು.

(4) ಮೇಲಿನ (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಿದ ಯಾವುದೇ ಆದೇಶವನ್ನು, ಯಾವ ಮೂಲ ಆದೇಶದಲ್ಲಿ ತಪ್ಪನ್ನು ಸರಿಪಡಿಸಲಾಗಿದೆಯೋ ಆ ಮೂಲ ಆದೇಶವನ್ನು ಯಾವ ಕಾನೂನಿನ ಅಡಿಯಲ್ಲಿ ಮಾಡಲಾಗಿತ್ತೋ ಆ ಕಾನೂನಿನ ಅದೇ ಉಪಬಂಧದ ಅಡಿಯಲ್ಲಿ ಮಾಡಿದ ಆದೇಶವೆಂಬುದಾಗಿ ಭಾವಿಸತಕ್ಕದ್ದು.

(5) ಒಂದು ನ್ಯಾಯಾಲಯದ ಅಥವಾ ನ್ಯಾಯಾಧಿಕರಣದ ಹೊರತಾಗಿ ಅಪೀಲು ಪ್ರಾಧಿಕಾರದ ಅಥವಾ ಪುನರೀಕ್ಷಣಾ ಪ್ರಾಧಿಕಾರದ ಯಾವುದೇ ತೆರಿಗೆ ನಿರ್ಧರಣೆ ಅಥವಾ ತೆರಿಗೆಯ ಮರು ನಿರ್ಧರಣೆ ಅಥವಾ ಒಂದು ಆದೇಶವು, ಯಾವುದೇ ನ್ಯಾಯಾಲಯದ ತೀರ್ಪು ಅಥವಾ ಆದೇಶದ ಮೂಲಕವಾದ ಸಾರ್ವಜನಿಕ ರಾಜಸ್ವದ ಹಿತಾಸಕ್ತಿಗೆ ಬಾಧಕವಾಗುವಷ್ಟರ ಮಟ್ಟಿಗೆ ತಪ್ಪಾಗಿದೆಯೆಂದು ಕಂಡು ಬಂದಲ್ಲಿ ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಸಂಬಂಧಪಟ್ಟ ಪ್ರಾಧಿಕಾರವು, ಅಂಥ ತೆರಿಗೆ ನಿರ್ಧರಣೆಯನ್ನು ಅಥವಾ ಮರು ತೆರಿಗೆ ನಿರ್ಧರಣೆಯನ್ನು ಅಥವಾ ಆದೇಶವನ್ನು ಸರಿಪಡಿಸಲು ಕ್ರಮಕೈಗೊಳ್ಳಲು ಮುಂದುವರಿಯಬಹುದು ಮತ್ತು ಅಂಥ ತೀರ್ಪು ಅಥವಾ ಆದೇಶದ ದಿನಾಂಕದಿಂದ ಮೂರು ವರ್ಷಗಳ ಅವಧಿಯೊಳಗೆ ಯಾವುದೇ ಸಮಯದಲ್ಲಿ ಅಂಥ ತೀರ್ಪು ಅಥವಾ ಆದೇಶಕ್ಕನುಸಾರವಾಗಿ ವ್ಯಾಪಾರಿಯು ಸಂದಾಯಮಾಡಬೇಕಾದ ತೆರಿಗೆಯನ್ನು ನಿರ್ಧರಿಸಬಹುದು.

(6) ಈ ಅಧಿನಿಯಮದ ಅಥವಾ ಇತರ ಯಾವುದೇ ಕಾನೂನಿನ ಅಡಿಯಲ್ಲಿ ಮಾಡಿದ ಯಾವುದೇ ತೆರಿಗೆ ನಿರ್ಧರಣೆಯನ್ನು ಈಗಾಗಲೇ ಯಾವ ಕಾನೂನಿನ ಅಡಿಯಲ್ಲಿ ನಿರ್ಧರಣೆ ಮಾಡಲಾಗಿತ್ತೋ ಅದಕ್ಕೆ ಬದಲಾಗಿ ಬೇರೊಂದು ಕಾನೂನಿನ ಉಪಬಂಧದ ಅಡಿಯಲ್ಲಿ ತೆರಿಗೆ ನಿರ್ಧರಣೆಯನ್ನು ಮಾಡಬೇಕಾಗಿತ್ತು ಎಂಬುದಾಗಿ ಯಾವುದೇ ನ್ಯಾಯಾಲಯ ಅಥವಾ ನ್ಯಾಯಾಧಿಕರಣವು ಆದೇಶ ಮಾಡಿದ್ದರೆ ಅಥವಾ ತೀರ್ಪು ನೀಡಿದ್ದರೆ, ಆಗ ಯಾವುದೇ ಅಂಥ ಆದೇಶ ಅಥವಾ ತೀರ್ಪಿನ ಪರಿಣಾಮವಾಗಿ ಅಥವಾ ಅಂಥ ಯಾವುದೇ ಆದೇಶ ಅಥವಾ ತೀರ್ಪಿನಲ್ಲಿ ಒಳಗೊಂಡಿರುವ ಯಾವುದೇ ನಿರ್ಣಯ ಅಥವಾ ನಿರ್ದೇಶನವನ್ನು ಜಾರಿಗೊಳಿಸುವುದಕ್ಕಾಗಿ, ವಹಿವಾಟಿನ ಅಥವಾ ಅದರ ಭಾಗದ ತೆರಿಗೆಯ ನಿರ್ಧರಣೆ ಅಥವಾ ಸಂದರ್ಭಾನುಸಾರ ತೆರಿಗೆಯ ಮರು ನಿರ್ಧರಣೆಯನ್ನು, ನಿರ್ಧರಣೆ ಅಥವಾ ಮರು ನಿರ್ಧರಣೆಗೆ ಅನ್ವಯವಾಗುವ ಕಾನೂನಿನ ಮೇರೆಗೆ ಅನ್ಯಥಾ ಅನ್ವಯವಾಗುವ ಕಾಲಮಿತಿ ಅವಧಿಯು ಏನೇ ಇದ್ದರೂ, ಅಂಥ ಆದೇಶ ಅಥವಾ ತೀರ್ಪಿನ ದಿನಾಂಕದಿಂದ ಐದು ವರ್ಷಗಳ ಒಳಗೆ ಯಾವುದೇ ಸಮಯದಲ್ಲಿ ಮಾಡಬಹುದು.

(7) ಸಂದಾಯ ಮಾಡದೇ ಉಳಿದ ಯಾವುದೇ ತೆರಿಗೆ, ದಂಡ, ಬಡ್ಡಿ ಅಥವಾ ಅದರ ಯಾವುದೇ ಉಳಿದ ಭಾಗಕ್ಕಾಗಿ ಯಾವುವೇ ವ್ಯವಹರಣೆಗಳು ಒಂದು ನ್ಯಾಯಾಲಯದಲ್ಲಿ ಪ್ರಾರಂಭವಾಗಿದ್ದು ಮತ್ತು ಅಪೀಲಿನಲ್ಲಿ ಮಾಡಿದ ಯಾವುದೇ ತೀರ್ಮಾನದ ಅಥವಾ ಹೊರಡಿಸಿದ ಆದೇಶದ ಪರಿಣಾಮದಿಂದಾಗಿ ತೆರಿಗೆ, ದಂಡ ಅಥವಾ ಬಡ್ಡಿಯ ಮೊಬಲಗನ್ನು ಆ ತರುವಾಯ ಮಾರ್ಪಡಿಸಿದಲ್ಲಿ, ಹೆಚ್ಚಿಸಿದಲ್ಲಿ ಅಥವಾ ಇಳಿಸಿದಲ್ಲಿ, ನಿಯಮಿಸಲಾದ ಪ್ರಾಧಿಕಾರವು, ನಿಯಮಿಸಬಹುದಾದ ಅಂಥ ರೀತಿಯಲ್ಲಿ ಮತ್ತು ಅಂಥ ಅವಧಿಯೊಳಗೆ, ವ್ಯಾಪಾರಿಗೆ ಅಥವಾ ವ್ಯಕ್ತಿಗೆ ಮತ್ತು ಅಂಥ ವಸೂಲಿಯನ್ನು ಯಾರ ಆದೇಶದ ಅಡಿಯಲ್ಲಿ ಮಾಡಲಾಗುವುದೋ ಆ ಪ್ರಾಧಿಕಾರಕ್ಕೆ ತಿಳಿಸತಕ್ಕದ್ದು ಮತ್ತು ತದನಂತರ, ಅಂಥ ವ್ಯವಹರಣೆಗಳನ್ನು ಮಾರ್ಪಾಟಾದ, ಹೆಚ್ಚಿಸಿದ ಅಥವಾ ಇಳಿಸಿದ ತೆರಿಗೆ, ದಂಡ ಅಥವಾ ಬಡ್ಡಿಯ ಮೊತ್ತವನ್ನು ಪ್ರತಿಯೋಜಿಸುವುದರೊಂದಿಗೆ ಮುಂದುವರಿಸಬಹುದು:

ಪರಂತು, ತೆರಿಗೆ ನಿರ್ಧರಣೆಯನ್ನು ಹೆಚ್ಚಿಸುವ ಅಥವಾ ಅನ್ಯಥಾ ತೆರಿಗೆದಾರನ ಹೊಣೆಗಾರಿಕೆಗಳನ್ನು ಹೆಚ್ಚಿಸುವ ಸರಿಪಡಿಸುವಿಕೆಯನ್ನು, ತೆರಿಗೆ ನಿರ್ಧರಣಾ ಪ್ರಾಧಿಕಾರ, ಅಪೀಲು ಪ್ರಾಧಿಕಾರ ಅಥವಾ ಸಂದರ್ಭಾನುಸಾರವಾಗಿ ಪರಿಷ್ಕೃತ ಪ್ರಾಧಿಕಾರವು ಹಾಗೆ ಮಾಡುವ ತನ್ನ ಉದ್ದೇಶವನ್ನು ತೆರಿಗೆದಾರನ ಗಮನಕ್ಕೆ ತಂದ ಹೊರತು ಹಾಗೂ ತೆರಿಗೆದಾರಣಿಗೆ ಅಹವಾಲನ್ನು ಹೇಳಿಕೊಳ್ಳು ಯುಕ್ತ ಅವಕಾಶವನ್ನು ನೀಡಿದ ಹೊರತು ಮಾಡತಕ್ಕದ್ದಲ್ಲ."

(9) 20ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

**"20-ಎ. ನೋಂದಣಿಗೆ ಸಂಬಂಧಿಸಿದ ದಂಡಗಳು.-** (1) ಒಬ್ಬ ವ್ಯಾಪಾರಿಯು, ಸೂಕ್ತ ಕಾರಣಗಳಿಲ್ಲದೆ, 4ನೇ ಪ್ರಕರಣದಲ್ಲಿ ನಿಯಮಿಸಲಾದ ಕಾಲದೊಳಗೆ ನೋಂದಣಿಗಾಗಿ ಅರ್ಜಿ ಸಲ್ಲಿಸಲು ತಪ್ಪಿದಲ್ಲಿ, ಅವನು 5-ಸಿ ಪ್ರಕರಣದ ಅಡಿಯಲ್ಲಿ ಉಪಬಂಧಿಸಲಾದ ದರದಲ್ಲಿ ಸಂದಾಯ ಮಾಡಬೇಕಾದ ತೆರಿಗೆಯ ಮೇಲೆ ವಿಧಿಸಬಹುದಾದ ಬಡ್ಡಿಗೆ ಹೆಚ್ಚುವರಿಯಾಗಿ ಎರಡು ಸಾವಿರ ರೂಪಾಯಿಗಳ ದಂಡ ನೀಡಲು ಬದ್ಧನಾಗಿರತಕ್ಕದ್ದು.

(2) ದಂಡಗಳನ್ನು ವಿಧಿಸುವ ಅಧಿಕಾರವು, ನಿಯಮಿಸಲಾದಂತೆ ನೋಂದಣಿ ಪ್ರಾಧಿಕಾರದಲ್ಲಿ ನಿಹಿತವಾಗಿರತಕ್ಕದ್ದು.

**20-ಬಿ. ವಿವರ ಪಟ್ಟಿಗಳಿಗೆ ಮತ್ತು ತೆರಿಗೆ ನಿರ್ಧರಣಕ್ಕೆ ಸಂಬಂಧಿಸಿದ ದಂಡಗಳು.-** (1) ಅಧಿನಿಯಮದ ಅಡಿಯಲ್ಲಿ ಅಗತ್ಯಪಡಿಸಿದಂತೆ ಒಂದು ವಿವರಪಟ್ಟಿ ಸಲ್ಲಿಸಲು ತಪ್ಪಿದ ಅಥವಾ ಸಲ್ಲಿಸಿದ ಯಾವುದೇ ವಿವರ ಪಟ್ಟಿಯಂತೆ ಬಾಕಿ ಇರುವ ತೆರಿಗೆಯನ್ನು ಸಂದಾಯಮಾಡಲು ವಿಫಲನಾದ ಒಬ್ಬ ವ್ಯಾಪಾರಿಯು ಬಾಕಿ ಇರುವ ಯಾವುದೇ ತೆರಿಗೆ ಅಥವಾ ಬಡ್ಡಿಯ ಜೊತೆಗೆ,-

(ಎ) ಸಂದಾಯಮಾಡಲು ತಪ್ಪಿದ ಪ್ರತಿಯೊಂದು ದಿನಕ್ಕಾಗಿ ಐವತ್ತು ರೂಪಾಯಿಗಳ ದಂಡವನ್ನು ಮತ್ತು ಹಾಗೆ ಸಂದಾಯಮಾಡಲು ತಪ್ಪಿರುವುದು ಐದು ದಿನಗಳಿಗಿಂತ ಹೆಚ್ಚಾಗಿರುವಲ್ಲಿ,

(i) ತೆರಿಗೆ ಬಾಕಿಯು ಇನ್ನೂರೈವತ್ತು ರೂಪಾಯಿಗಳಿಗಿಂತ ಕಡಿಮೆ ಇದ್ದರೆ, ಅಂಥ ದಂಡವು ಇನ್ನೂರಐವತ್ತು ರೂಪಾಯಿಗಳನ್ನು ಮೀರತಕ್ಕದ್ದಲ್ಲ;

(ii) ತೆರಿಗೆ ಬಾಕಿಯು ಇನ್ನೂರಐವತ್ತು ರೂಪಾಯಿಗಳಿಗಿಂತ ಹೆಚ್ಚಾಗಿದ್ದರೆ, ಅಂಥ ದಂಡವನ್ನು ಪ್ರತಿ ದಿನಕ್ಕೆ ಐವತ್ತು ರೂಪಾಯಿಗಳಂತೆ, ಬಾಕಿ ಇರುವ ತೆರಿಗೆಯ ಮೊಬಲಗನ್ನು ಮೀರದಂತೆ ಲೆಕ್ಕಹಾಕತಕ್ಕದ್ದು; ಮತ್ತು

(ಬಿ) (i) ಸಂದಾಯಮಾಡಲು ತಪ್ಪಿರುವುದು, ಹತ್ತು ದಿನಗಳಿಗಿಂತ ಹೆಚ್ಚಾಗಿಲ್ಲದಿದ್ದರೆ ಬಾಕಿ ಇರುವ ತೆರಿಗೆ ಮೊಬಲಗಿನ ಶೇಕಡಾ ಐದರಷ್ಟು ಅಥವಾ ಐವತ್ತು ರೂಪಾಯಿಗಳು ಇವುಗಳಲ್ಲಿ ಯಾವುದು ಹೆಚ್ಚೋ ಅಷ್ಟಕ್ಕೆ ಸಮನಾದ ಹೆಚ್ಚಿನ ದಂಡವನ್ನು ;

(ii) ಸಂದಾಯ ಮಾಡಲು ತಪ್ಪಿರುವುದು ಹತ್ತು ದಿನಗಳಿಗಿಂತ ಹೆಚ್ಚಾಗಿದ್ದರೆ, ಬಾಕಿ ಇರುವ ತೆರಿಗೆಯ ಶೇಕಡಾ ಹತ್ತಕ್ಕೆ, ಸಮನಾದ ಹೆಚ್ಚಿನ ದಂಡವನ್ನು,

- ಸಂದಾಯಮಾಡಲು ಹೊಣೆಗಾರನಾಗತಕ್ಕದ್ದು.

(2) ಒಬ್ಬ ವ್ಯಾಪಾರಿಯು, ಯಾವುದೇ ನಿಯಮಿಸಲಾದ ತೆರಿಗೆ ಅವಧಿಗಾಗಿ ಒಂದು ವಿವರ ಪಟ್ಟಿಯನ್ನು ಅಥವಾ ಒಂದು ವಿವರ ಪಟ್ಟಿಯ ತಯಾರಿಕೆಗಾಗಿ ಯಾವುದೇ ವಿವರಗಳನ್ನು ಸಲ್ಲಿಸಿದ್ದು, ಅದು ಅವನ ತೆರಿಗೆ ಬದ್ಧತೆಯನ್ನು ಕಡಿಮೆ ತೋರಿಸಿದರೆ ಅಥವಾ ಅವನ ವಾಸ್ತವಿಕ ತೆರಿಗೆ ಬದ್ಧತೆಯ ಅಥವಾ ಸಂದರ್ಭಾನುಸಾರ ಅವನ ವಾಸ್ತವಿಕ ತೆರಿಗೆ ಜಮೆಯ ಶೇಕಡ ಐದಕ್ಕಿಂತ ಹೆಚ್ಚು ತೆರಿಗೆ ಜಮೆಗೆ ಅವನ ಹಕ್ಕುದಾರಿಕೆಯನ್ನು ಹೆಚ್ಚಿಗೆ ತೋರಿಸಿದರೆ, ಅವನಿಗೆ ದಂಡ ವಿಧಿಸುವಿಕೆಯ ವಿರುದ್ಧ ಲಿಖಿತದಲ್ಲಿ ಕಾರಣ ತೋರಿಸಲು ಅವಕಾಶ ನೀಡಲಾದ ತರುವಾಯ, ಕಡಿಮೆ ಅಥವಾ ಹೆಚ್ಚಿಗೆ ತೋರಿಸಿದ ಅಂಥ ತೆರಿಗೆ ಮೊಬಲಗಿನ ಶೇಕಡಾ ಹತ್ತಕ್ಕೆ ಸಮನಾದ ದಂಡಕ್ಕೆ ಬದ್ಧನಾಗಿರತಕ್ಕದ್ದು.

(3) ಆತನಿಗೆ ನೀಡಿದ ನೋಟೀಸಿನಲ್ಲಿ ತಿಳಿಸಲಾದಂತೆ ಅಪೂರ್ಣವಾಗಿದ್ದ ಅಥವಾ ಯಾವುದೇ ಮುಖ್ಯ ವಿವರಗಳಲ್ಲಿ ತಪ್ಪಾಗಿರುವ ಒಂದು ವಿವರ ಪಟ್ಟಿಯನ್ನು ಸಲ್ಲಿಸಿದ್ದ ಒಬ್ಬ ವ್ಯಾಪಾರಿಯು, ವಿವರ ಪಟ್ಟಿಯು ಅಪೂರ್ಣವಾಗಿ ಅಥವಾ ತಪ್ಪಾಗಿ ಉಳಿಯುವ ಪ್ರತಿದಿನಕ್ಕಾಗಿ ಐವತ್ತು ರೂಪಾಯಿಗಳ ದಂಡಕ್ಕೆ ಗುರಿಯಾಗತಕ್ಕದ್ದು.

(4) ವಿವರ ಪಟ್ಟಿಯನ್ನು ಸಲ್ಲಿಸಲು ವಿಫಲನಾದ ಒಬ್ಬ ವ್ಯಾಪಾರಿಗೆ, ಅವನು ವಾಸ್ತವವಾಗಿ ತೆರಿಗೆಗೆ ಬದ್ಧನಾಗಿದ್ದಕ್ಕಿಂತ ಕಡಿಮೆ ತೋರಿಸುವ ತೆರಿಗೆ ನಿರ್ಧರಣೆಯೊಂದನ್ನು ನೀಡಲಾಗಿದ್ದ ಸಂದರ್ಭದಲ್ಲಿ ಮತ್ತು ಅವನು ಅಂಥ ತೆರಿಗೆಯನ್ನು ತೆರಿಗೆ ನಿರ್ಧರಣೆಯಂತೆ ಸಂದಾಯ ಮಾಡಿದ್ದಲ್ಲಿ, ಅಂಥ ವ್ಯಾಪಾರಿಗೆ ದಂಡ ವಿಧಿಸುವುದರ ವಿರುದ್ಧ ಲಿಖಿತ ಕಾರಣಗಳನ್ನು ತೋರಿಸಲು ಅವಕಾಶ ನೀಡಿದ ತರುವಾಯ, ಕಡಿಮೆಯಾಗಿ ತೆರಿಗೆ ನಿರ್ಧರಣೆ ಮಾಡಿದ ತೆರಿಗೆ ಮೊಬಲಗಿನ ಶೇಕಡಾ ಹತ್ತರಷ್ಟು ದಂಡಕ್ಕೆ ಬದ್ಧನಾಗತಕ್ಕದ್ದು.

(5) ನೋಂದಾಯಿತನಾಗಲು ಬದ್ಧನಾಗಿದ್ದಾಗ್ಯೂ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಹಾಗೆ ಮಾಡಲು ತಪ್ಪಿದ ಒಬ್ಬ ವ್ಯಾಪಾರಿಯು ದಂಡನೆಯನ್ನು ಏಕೆ ವಿಧಿಸಬಾರದೆಂಬ ಬಗ್ಗೆ ಲಿಖಿತದಲ್ಲಿ ಕಾರಣಗಳನ್ನು ತೋರಿಸುವ ಹೇಳಿಕೆಯನ್ನು ನೀಡಲು ಅವಕಾಶವನ್ನು ಕೊಟ್ಟ ತರುವಾಯ ಆತ ಸಂದಾಯಮಾಡಬೇಕಾದ 5–ಡಿನೇ ಪ್ರಕರಣದ ಅಡಿಯಲ್ಲಿ ನಿರ್ಧರಿಸಿದ ತೆರಿಗೆಯ ಅಥವಾ 6ನೇ ಪ್ರಕರಣದ ಅಡಿಯಲ್ಲಿ ಮರು ನಿರ್ಧರಿಸಿದ ತೆರಿಗೆ ಮೊಬಲಗಿನ ಶೇಕಡ ಮೂವತ್ತರ ದರದಲ್ಲಿ ದಂಡವನ್ನು ಸಂದಾಯಮಾಡಲು ಬದ್ಧನಾಗಿರತಕ್ಕದ್ದು.

(6) ಮೇಲ್ಕಂಡ ದಂಡಗಳನ್ನು ವಿಧಿಸುವ ಅಧಿಕಾರವು, ವಿವರ ಪಟ್ಟಿಗಳನ್ನು ಸ್ವೀಕರಿಸಲು ಅಗತ್ಯಪಡಿಸಲಾದ ನಿಯಮಿಸಲಾದ ಪ್ರಾಧಿಕಾರದಲ್ಲಿ ಅಥವಾ ತೆರಿಗೆ ನಿರ್ಧರಣೆ ಅಥವಾ ತೆರಿಗೆ ಪುನರ್ ನಿರ್ಧರಣೆ ಮಾಡಲು ನಿಯಮಿಸಲಾದ ಪ್ರಾಧಿಕಾರದಲ್ಲಿ ನಿಹಿತವಾಗಿರತಕ್ಕದ್ದು.

(7) ಅಧಿನಿಯಮದ ಉಪಬಂಧಗಳ ಮೂಲಕ ಅಗತ್ಯಪಡಿಸಿದಂಥ ವಿವರ ಪಟ್ಟಿಗಳನ್ನು ನಿರಂತರವಾಗಿ ಮೂರು ತಿಂಗಳು ಅಥವಾ ಸಂದರ್ಭಾನುಸಾರ ಎರಡು ತ್ರೈಮಾಸಿಕಗಳ ಅವಧಿಗೆ ಸಲ್ಲಿಸುವುದಕ್ಕೆ ವಿಫಲನಾದಂಥ ಯಾವೊಬ್ಬ ವ್ಯಾಪಾರಿಯು, ಅಪರಾಧ ನಿರ್ಣಯವಾದ ತರುವಾಯ, ಯಾವುದೇ ತೆರಿಗೆ ಅಥವಾ ದಂಡ ಅಥವಾ ಬಡ್ಡಿ ಅಥವಾ ಆತನಿಂದ ಬರಬೇಕಾದ ಅಥವಾ ಆತನ ಮೇಲೆ ವಿಧಿಸಿದ ಇತರ ಮೊಬಲಗಿನ ಜೊತೆಗೆ, ಆರು ತಿಂಗಳುಗಳಿಗೆ ವಿಸ್ತರಿಸಬಹುದಾದಂಥ ಸಾದಾ ಕಾರಾವಾಸದೊಂದಿಗೆ ಅಥವಾ ಐದು ಸಾವಿರ ರೂಪಾಯಿಗಳಿಗೆ ಕಡಿಮೆ ಇರದ ಆದರೆ ಇಪ್ಪತ್ತೈದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದ ಅಂಥ ಜುಲ್ಮಾನೆಯಿಂದ ಅಥವಾ ಅವೆರೆಡರಿಂದಲೂ ಮತ್ತು ಅಪರಾಧವು ಮುಂದುವರೆಯುತ್ತಿರುವಾಗ, ಅಪರಾಧವು ಮುಂದುವರೆದ ಅವಧಿಗೆ ಪ್ರತಿದಿನ ಎರಡು ನೂರು ರೂಪಾಯಿಗಳನ್ನು ಮೀರದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು."

(10) 21ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ, (ಎ), (ಬಿ), (ಸಿ), (ಡಿ), (ಇ) ಮತ್ತು (ಎಫ್) ಖಂಡಗಳನ್ನು ಬಿಟ್ಟುಬಿಡತಕ್ಕದ್ದು;

(ii) (2)ನೇ ಉಪಪ್ರಕರಣದಲ್ಲಿ, (ಎ) ಮತ್ತು (ಬಿ) ಖಂಡಗಳನ್ನು ಬಿಟ್ಟುಬಿಡತಕ್ಕದ್ದು;

(11) 32ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**33. ಉಳಿಸುವಿಕೆಗಳು.**– ಕರ್ನಾಟಕ ತೆರಿಗೆ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2014ರ ಮೂಲಕ ಈ ಅಧಿನಿಯಮದ ಉಪಬಂಧಗಳಿಗೆ ಮಾಡಲಾದ ತಿದ್ದುಪಡಿಗಳು, ಸದರಿ ಅಧಿನಿಯಮದ ಪ್ರಾರಂಭದ ಮುಂಚೆ ಇದ್ದ ಸದರಿ ಉಪಬಂಧಗಳ ಪೂರ್ವ ಕಾರ್ಯಾಚರಣೆಗೆ ಹಾಗೂ ಸ್ವಯಂ–ತೆರಿಗೆ ನಿರ್ಧರಣೆ ಹಾಗೂ ತೆರಿಗೆ ನಿರ್ಧರಣೆ, ಮರುತೆರಿಗೆ ನಿರ್ಧರಣೆ, ದಂಡ ವಿಧಿಸುವಿಕೆ, ಬಡ್ಡಿಯನ್ನು ಸಂದಾಯ ಮಾಡುವುದರ ಹೊಣೆಗಾರಿಕೆ, ನಿರ್ಧರಣೆ ಅಥವಾ ಮರು–ನಿರ್ಧರಣೆಯ ಸೀಮಿತ ಅವಧಿಯನ್ನು ರದ್ದುಗೊಳಿಸುವುದನ್ನು ಒಳಗೊಂಡಂತೆ ಮುಂಚಿತವಾಗಿ ತೆರಿಗೆ ಸಂದಾಯ ಮಾಡುವುದ, ವಿವರಣೆಯನ್ನು ಸಲ್ಲಿಸುವುದು ಹಾಗೂ ವಿವರ ಪಟ್ಟಿ, ತೆರಿಗೆ ನಿರ್ಧರಣೆ ಹಾಗೂ ಇತರ ಸದೃಶ ವಿಷಯಗಳಿಗೆ ಹಾಗೂ ಸದರಿ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಹಿಂದಿನ ಯಾವುದೇ ವರ್ಷದ ಸಂಬಂಧದಲ್ಲಿ ವಿಧಿಸಲಾದ ಬಾಧ್ಯತೆಗಳಿಗೆ ಬಾಧಕವಾಗತಕ್ಕದ್ದಲ್ಲ."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಆಯವ್ಯಯ ಭಾಷಣದಲ್ಲಿ ಮಾಡಿದ ಪ್ರಸ್ತಾವಗಳನ್ನು ಜಾರಿಗೊಳಿಸಲು ಮತ್ತು ಅವುಗಳಿಗೆ ಸಂಬಂಧಿಸಿದ ವಿಷಯಗಳಿಗಾಗಿ ಕರ್ನಾಟಕ ವಿಲಾಸಗಳ ಮೇಲೆ ತೆರಿಗೆ ಅಧಿನಿಯಮ, 1979 ಮತ್ತು ಕರ್ನಾಟಕ ಸರಕುಗಳ ಪ್ರವೇಶದ ಮೇಲೆ ತೆರಿಗೆ ಅಧಿನಿಯಮ, 1979 ಇವುಗಳನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

## ಪ್ರತ್ಯಾಯೋಜಿತ ಶಾಸನ ರಚನೆಗೆ ಸಂಬಂಧಿಸಿದ ಜ್ಞಾಪನ ಪತ್ರ

ಖಂಡ 3(1) — 3ನೇ ಖಂಡದ (1)ನೇ ಉಪಖಂಡದಲ್ಲಿ ಪ್ರತಿಯೋಜಿಸಲು ಉದ್ದೇಶಿಸಲಾದ 5ನೇ ಪ್ರಕರಣದ ಉಪಬಂಧಗಳು, ವ್ಯಾಪಾರಿಯು ವಿವರ ಪಟ್ಟಿಯನ್ನು ಸಲ್ಲಿಸುವ ನಮೂನೆ ಮತ್ತು ವಿಧಾನದ ಬಗ್ಗೆ, ವಿವರ ಪಟ್ಟಿಯನ್ನು ಸಲ್ಲಿಸಬೇಕಾದ ತೆರಿಗೆ ಅವಧಿ ಮತ್ತು ವಾರ್ಷಿಕ ವಿವರ ಪಟ್ಟಿಯಲ್ಲಿ ಸಲ್ಲಿಸಬೇಕಾದ ವಿವರಗಳು ಮತ್ತು ಅಂಥ ವಿವರ ಪಟ್ಟಿಯನ್ನು ಯಾವ ದಿನಾಂಕದೊಳಗೆ ಸಲ್ಲಿಸತಕ್ಕದ್ದು ಎಂಬ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ ಮತ್ತು ಪ್ರತಿ ತಿಂಗಳು ನಿಯಮಿಸಲಾದ ನಮೂನೆಯಲ್ಲಿ ವಿದ್ಯುನ್ಮಾನದ ಮೂಲಕ ವಿವರ ಪಟ್ಟಿಗಳನ್ನು ಸಲ್ಲಿಸುವುದು ಮತ್ತು ವಿದ್ಯುನ್ಮಾನದ ಮೂಲಕ ತೆರಿಗೆಯನ್ನು ಪಾವತಿಸಲು ಅಗತ್ಯ ಪಡಿಸುವ ನೋಂದಾಯಿತ ವ್ಯಾಪಾರಿಗಳ ವರ್ಗವನ್ನು ಅಧಿಸೂಚಿಸಲು ಕೂಡಾ ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

ಖಂಡ 3(2) 3ನೇ ಖಂಡದ (2)ನೇ ಉಪಖಂಡದ ಅಡಿಯಲ್ಲಿ ಉದ್ದೇಶಿಸಲಾದ ಹೊಸ 5–ಬಿ ಪ್ರಕರಣದ (1)ನೇ ಉಪಪ್ರಕರಣದ ಉಪಬಂಧಗಳು, ವಿವರ ಪಟ್ಟಿಕೆಯಲ್ಲಿ ಘೋಷಿಸಬೇಕಾದ ಯಾವುದೇ ಮೊತ್ತದ ಮೇಲೆ ಬಡ್ಡಿಯನ್ನು ಪಾವತಿಸುವ ಹೊಣೆಗಾರಿಕೆಯನ್ನು, ಅದರಿಂದ ತೆಗೆದು ಹಾಕಲ್ಪಟ್ಟಿದ್ದು, 20–ಬಿ ಪ್ರಕರಣದ (2)ನೇ ಉಪಪ್ರಕರಣಕ್ಕೆ ಒಳಪಟ್ಟು ಅಂಥ ತೆಗೆದುಹಾಕುವಿಕೆಯನ್ನು ಮೂರು ತಿಂಗಳೊಳಗೆ ಸರಿ ಪಡಿಸಿದುದನ್ನು ಹೊರತುಪಡಿಸಿ, ಘೋಷಿಸುವ ನಮೂನೆಯ ಮತ್ತು ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 3(6)(ii) 3ನೇ ಖಂಡದ (6)ನೇ ಉಪಖಂಡದ ಅಡಿಯಲ್ಲಿ ಪ್ರತಿಯೋಜಿಸಲು ಉದ್ದೇಶಿಸಲಾದ 8ನೇ ಪ್ರಕರಣದ (1)ನೇ ಉಪಪ್ರಕರಣದ ಉಪಬಂಧಗಳು, ಅರ್ಜಿಯನ್ನು ಸಲ್ಲಿಸಲು ವ್ಯಾಪಾರಿಯು ಪಾವತಿಸಬೇಕಾದ ತೆರಿಗೆಯ ಅಥವಾ ಯಾವುದೇ ಇತರ ಮೊತ್ತದ ಷರತ್ತುಗಳು, ಕಂತುಗಳು ಮತ್ತು ಅಂತರಗಳನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರ ಅಥವಾ ಆಯುಕ್ತರಿಗೆ ಅಧಿಕಾರ ನೀಡುತ್ತದೆ.

ಖಂಡ 3(6)(iii) 3ನೇ ಖಂಡದ (6)ನೇ ಉಪಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿಸಲಾದ 8ನೇ ಪ್ರಕರಣದ (1–ಬಿ) ಉಪಪ್ರಕರಣದ ಉಪಬಂಧಗಳು, ವ್ಯಾಪಾರಿಯು ಪರಿಷ್ಕೃತ ವಿವರ ಪಟ್ಟಿಯ ಜೊತೆಗೆ ಪಾವತಿಸಬೇಕಾದ ಯಾವುದೇ ವ್ಯತ್ಯಾಸದ ಮೊತ್ತವನ್ನು ಪಾವತಿಸಬೇಕಾದ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಸಿದ್ದರಾಮಯ್ಯ**
ಮುಖ್ಯ ಮಂತ್ರಿಗಳು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

## ಕರ್ನಾಟಕ ವಿಲಾಸಗಳ ಮೇಲೆ ತೆರಿಗೆ ಅಧಿನಿಯಮ, 1979ರ (1979ರ ಕರ್ನಾಟಕ ಅಧಿನಿಯಮ 22)

## ಉದ್ಧೃತ ಭಾಗ

**xxxxx**

**3. ಉಪಹಾರ ಗೃಹಗಳಲ್ಲಿ ಒದಗಿಸಲಾದ ವಿಲಾಸದ ಮೇಲೆ ತೆರಿಗೆಯನ್ನು ವಿಧಿಸುವುದು ಮತ್ತು ಸಂಗ್ರಹಿಸುವುದು.–** (1) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಪ್ರತಿಯೊಂದು ಕೊಠಡಿಯ ಸಂಬಂಧದಲ್ಲಿ ಉಪಹಾರ ಗೃಹದಲ್ಲಿ ಒದಗಿಸಲಾದ ವಿಲಾಸದ ಮೇಲೆ ಈ ಮುಂದಿನ ದರದಲ್ಲಿ ತೆರಿಗೆಯನ್ನು ವಿಧಿಸತಕ್ಕದ್ದು ಮತ್ತು ಸಂಗ್ರಹಿಸತಕ್ಕದ್ದು, ಎಂದರೆ:–

| ಕ್ರಮ ಸಂಖ್ಯೆ | ಚಾರ್ಜುಗಳು | ತೆರಿಗೆ ದರ |
|---|---|---|
| 1 | ಕೊಠಡಿಯೊಂದಕ್ಕೆ ವಸತಿಗಾಗಿ ಒಂದು ದಿನಕ್ಕೆ ಐದು ನೂರು ರೂಪಾಯಿಗಳಿಗಿಂತ ಕಡಿಮೆಯಿಲ್ಲದ ಆದರೆ ಒಂದು ಸಾವಿರ ರೂಪಾಯಿಗಿಂತ ಹೆಚ್ಚಿಲ್ಲದ ಚಾರ್ಜುಗಳಿದ್ದಲ್ಲಿ | ಅಂಥ ಚಾರ್ಜುಗಳ ಶೇಕಡ ನಾಲ್ಕು |
| 2 | ಕೊಠಡಿಯೊಂದಕ್ಕೆ ವಸತಿಗಾಗಿ ಒಂದು ದಿನಕ್ಕೆ ಒಂದು ಸಾವಿರ ರೂಪಾಯಿಗಳಿಗಿಂತ ಹೆಚ್ಚಿಲ್ಲದ ಆದರೆ ಎರಡು ಸಾವಿರ ರೂಪಾಯಿಗಿಂತ ಹೆಚ್ಚಿಲ್ಲದ ಚಾರ್ಜುಗಳಿದ್ದಲ್ಲಿ | ಅಂಥ ಚಾರ್ಜುಗಳ ಶೇಕಡ ಎಂಟು |
| 3 | ಕೊಠಡಿಯೊಂದಕ್ಕೆ ವಸತಿಗಾಗಿ ಒಂದು ದಿನಕ್ಕೆ ಎರಡು ಸಾವಿರ ರೂಪಾಯಿಗಳಿಗಿಂತ ಹೆಚ್ಚಿನ ಚಾರ್ಜುಗಳಿದ್ದಲ್ಲಿ | ಅಂಥ ಚಾರ್ಜುಗಳ ಶೇಕಡ ಹನ್ನೆರಡು |

**xxxxx**

**ಕರ್ನಾಟಕ ಸರಕುಗಳ ಪ್ರವೇಶದ ಮೇಲೆ ತೆರಿಗೆ ಅಧಿನಿಯಮ, 1979 (1979ರ ಕರ್ನಾಟಕ ಅಧಿನಿಯಮ 27) ಉದ್ಧೃತ ಭಾಗ**

**5. ವಿವರಪಟ್ಟಿಕೆಗಳು ಮತ್ತು ಕರ ನಿರ್ಧಾರಣೆ.–** (1) 7ನೇ ಪ್ರಕರಣದಲ್ಲಿ ಏನೇ ಅಡಕವಾಗಿದ್ದಾಗ್ಯೂ, ನೋಂದಾಯಿತನಾದ ಪ್ರತಿಯಬ್ಬ ವ್ಯಾಪಾರಿಯು ಮತ್ತು ಈ ಅಧಿನಿಯಮದ ಅಡಿಯಲ್ಲಿ ಸ್ವತ: ನೋಂದಾಯಿತನಾಗಲು ಬದ್ಧನಾದ ಪ್ರತಿಯೊಬ್ಬ ವ್ಯಾಪಾರಿಯ ಪ್ರತಿವರ್ಷ ನಿಯಮಿಸಬಹುದಾದಂಥ ಅವಧಿಯೊಳಗೆ ಮತ್ತು ಅಂಥ ರೀತಿಯಲ್ಲಿ ಅಂಥ ವಿವರಗಳೊಂದಿಗೆ ಕರ ನಿರ್ಧಾರಣಾ ಪ್ರಾಧಿಕಾರಿಗೆ ವಿವರಪಟ್ಟಿಕೆಯನ್ನು ಸಲ್ಲಿಸತಕ್ಕದ್ದು.

ಪರಂತು ಆಯುಕ್ತರು ಅಧಿಸೂಚಿಸಬಹುದಾದಂತೆ, ಮಾಲೀಕರುಗಳ ನಿರ್ದಿಷ್ಟ ವರ್ಗವು, ನಿಯಮಿಸಬಹುದಾದ ನಮೂನೆಯಲ್ಲಿ ವಿವರಪಟ್ಟಿಯನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಸಲ್ಲಿಸತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ಯಾವನೇ ವ್ಯಾಪಾರಿಯು ಯಾವುದೇ ವಿವರಪಟ್ಟಿಕೆಯನ್ನು ಸಲ್ಲಿಸುವುದಕ್ಕೆ ಮುಂಚೆ ಅವನು 7ನೇ ಪ್ರಕರಣದ ಮೇರೆಗೆ ಈಗಾಗಲೇ ಸಂದಾಯ ಮಾಡಿದ ಯಾವುದೇ ತೆರಿಗೆಯನ್ನು ಕಡಿಮೆ ಮಾಡಲಾದಂತೆ ಅಂಥ ವಿವರಪಟ್ಟಿಕೆಯ ಆಧಾರದ ಮೇಲೆ ಅವನು

ಸಂದಾಯ ಮಾಡಬೇಕಾದ ತೆರಿಗೆಯ ಪೂರ್ಣ ಮೊಬಲಗನ್ನು ಮುಂಗಡವಾಗಿ ನಿಯಮಿಸಿದ ರೀತಿಯಲ್ಲಿ ಸಂದಾಯ ಮಾಡತಕ್ಕದ್ದು ಮತ್ತು ವಿವರಪಟ್ಟಿಕೆಯ ಜೊತೆಗೆ ಅಂಥ ತೆರಿಗೆ ಸಂದಾಯದ ಬಗ್ಗೆ ತೃಪ್ತಿಕರವಾದ ರುಜುವಾತನ್ನು ಒದಗಿಸತಕ್ಕದ್ದು. ಅಂತಿಮ ಕರ ನಿರ್ಧರಣೆಯನ್ನು ಮಾಡಿದ ತರುವಾಯ ಹಾಗೆ ಸಂದಾಯ ಮಾಡಿದ ತೆರಿಗೆಯ ಮೊಬಲಗನ್ನು ಅಂತಿಮವಾಗಿ ಕರ ನಿರ್ಧರಣೆ ಮಾಡಿದ ತೆರಿಗೆಯ ಬಗ್ಗೆ ಸಂದಾಯ ಮಾಡಿರುವುದಾಗಿ ಭಾವಿಸತಕ್ಕದ್ದು.

ಪರಂತು ಆಯುಕ್ತರು ಅಧಿಸೂಚಿಸಬಹುದಾದಂತೆ, ಮಾಲೀಕರುಗಳ ನಿರ್ದಿಷ್ಟ ವರ್ಗವು, (1)ನೇ ಉಪಪ್ರಕರಣದಡಿಯಲ್ಲಿನ ವಿವರಪಟ್ಟಿಯ ಆಧಾರದ ಮೇಲೆ ಪಾವತಿ ಮಾಡಬೇಕಾದ ತೆರಿಗೆಯನ್ನು ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ಸಲ್ಲಿಸಲಾದ ಯಾವುದೇ ವಿವರ ಪಟ್ಟಿಕೆಯು ಸರಿಯಾಗಿದೆಯೆಂದು ಮತ್ತು ಸಂಪೂರ್ಣವಾಗಿದೆಯೆಂದು ಕರ ನಿರ್ಧರಣಾ ಪ್ರಾಧಿಕಾರಿಯು ಸಮಾಧಾನ ಹೊಂದಿದರೆ, ಅವನು ಅದರ ಆಧಾರದ ಮೇಲೆ ವ್ಯಾಪಾರಿಯ ಬಗ್ಗೆ ಕರ ನಿರ್ಧರಿಸತಕ್ಕದ್ದು.

(4) ನಿಯಮಿಸಿದ ಅವಧಿಗೆ ಮುಂಚೆ (1)ನೇ ಉಪ-ಪ್ರಕರಣದ ಅಡಿಯಲ್ಲಿ ವ್ಯಾಪಾರಿಯು ವಿವರಪಟ್ಟಿಕೆಯನ್ನು ಸಲ್ಲಿಸದಿದ್ದರೆ ಅಥವಾ ಅವನು ಸಲ್ಲಿಸಿದ ವಿವರ ಪಟ್ಟಿಕೆಯು ಸರಿಯಾಗಿಲ್ಲವೆಂದು ಅಥವಾ ಪೂರ್ಣವಾಗಿದೆಯೆಂದು ಕರ ನಿರ್ಧರಣಾ ಪ್ರಾಧಿಕಾರಿಗೆ ಕಂಡುಬಂದರೆ ಅವನು ಅಂಥ ನಿರ್ಧಾರಣೆಯ ಬಗೆಗಿನ ಕಾರಣಗಳನ್ನು ದಾಖಲು ಮಾಡಿ, ತನ್ನ ಅತ್ಯುತ್ತಮ ವಿವೇಚನಾಸುಸಾರ ವ್ಯಾಪಾರಿಯ ಬಗೆ ಕರ ನಿರ್ಧರಿಸತಕ್ಕುದ್ದು.

ಪರಂತು, ಈ ಉಪಪ್ರಕರಣದ ಮೇರೆಗೆ ಕ್ರಮವನ್ನು ಕೈಕೊಳ್ಳುವ ಮೊದಲು ವ್ಯಾಪಾರಿಗೆ ಅವನು ಸಲ್ಲಿಸಿದ ವಿವರಪಟ್ಟಿಕೆಯ ಸರಿತನ ಮತ್ತು ಪೂರ್ಣತೆಯನ್ನು ರುಜುವಾತು ಮಾಡಲು ಯುಕ್ತ ಅವಕಾಶವನ್ನು ಕೊಡತಕ್ಕದ್ದು.

(5) (4)ನೇ ಉಪಪ್ರಕರಣದ ಅಡಿಯಲ್ಲಿ ಯಾವುದೇ ಕರನಿರ್ಧರಣೆಯನ್ನು ಮಾಡುವಾಗ ಕರನಿರ್ಧರಣಾ ಪ್ರಾಧಿಕಾರಿಯು, ವ್ಯಾಪಾರಿಯನ್ನು ಕರ ನಿರ್ಧರಿಸಿದ ತೆರಿಗೆಯ ಜೊತೆಗೆ ವ್ಯಾಪಾರಿಯು ಸಂದರ್ಭಾನುಸಾರ ತನ್ನ ವಿವರ ಪಟ್ಟಿಕೆಯಲ್ಲಿ ಬಹಿರಂಗಪಡಿಸದಿದ್ದ ಬಾಕಿಯಾಗುವ ತೆರಿಗೆಯ ಮೊಬಲಗಿನ ಒಂದೂವರೆಯಷ್ಟನ್ನು ಮೀರದ ದಂಡವನ್ನು ಅಥವಾ ವಿವರ ಪಟ್ಟಿಕೆಯನ್ನು ಸಲ್ಲಿಸಲು ತಪ್ಪಿದ ಸಂದರ್ಭದಲ್ಲಿ ಕರ ನಿರ್ಧರಿಸಿದ ತೆರಿಗೆಯ ಒಂದೂವರೆಯಷ್ಟನ್ನು ಸಂದಾಯ ಮಾಡುವಂತೆ ವ್ಯಾಪಾರಿಗೆ ನಿರ್ದೇಶಿಸಬಹುದು.

(6) ಯಾವುದೇ ವರ್ಷಕ್ಕಾಗಿ ಈ ಪ್ರಕರಣದಡಿ ಯಾವ ತೆರಿಗೆ ನಿರ್ಧರಣೆಯನ್ನೂ, 5ನೇ ಪ್ರಕರಣದಡಿ ಆ ವರ್ಷದ ಬಗ್ಗೆ ವಿವರ-ಪಟ್ಟಿಕೆಯನ್ನು ವ್ಯಾಪಾರಿಯು ಸಲ್ಲಿಸಿದ ದಿನಾಂಕದಿಂದ ಎರಡು ವರ್ಷಗಳ ಅವಧಿಯ ತರುವಾಯ ಮಾಡತಕ್ಕದ್ದಲ್ಲ.

ಪರಂತು ಕರ್ನಾಟಕ ತೆರಿಗೆ ಕಾನೂನುಗಳ (ತಿದ್ದುಪಡಿ) ಅಧಿನಿಯಮ 1997ರ ಪ್ರಾರಂಭಕ್ಕೆ ಮೊದಲು (10ನೇ ಉಪ-ಪ್ರಕರಣದಡಿ ವಿವರ-ಪತ್ರಿಕೆಯನ್ನು ಸಲ್ಲಿಸಲಾಗಿದ್ದು, ಅಂಥ ಪ್ರಾರಂಭವು ಕೊನೆಗೊಳ್ಳುವ ಯಾವುದೇ ವರ್ಷಕ್ಕೆ ಸಂಬಂಧಪಟ್ಟ ಅ ತೆರಿಗೆ-ನಿರ್ಧರಣೆ ವ್ಯವಹರಣೆಗಳು, ಅಂಥ ಪ್ರಾರಂಭದಿಂದ ಎರಡು ವರ್ಷಗಳ ಅವಧಿಯೊಳಗೆ ಸಂಪೂರ್ಣಗೊಳ್ಳತಕ್ಕದ್ದು-

ಮತ್ತೂ ಪರಂತು, ಕರನಿರ್ಧರಣೆಯನ್ನು ಯಾವ ಸಮಯದೊಳಗೆ ಮಾಡಬೇಕೆಂದು ಮಿತಿಗೊಳಿಸುವುದಕ್ಕೆ ಸಂಬಂಧಿಸಿ ಈ ಉಪ ಪ್ರಕರಣದಲ್ಲಿರುವುದು ಯಾವುದೂ 13,14 ಅಥವಾ 15ನೇ ಪ್ರಕರಣದ ಅಡಿಯಲ್ಲಿ ಮಾಡಲಾದ ಯಾವುದೇ ನಿರ್ಣಯ, ನಿರ್ದೇಶನ ಅಥವಾ ಆದೇಶದ ಪರಿಣಾಮವಾಗಿ ಅಥವ ಅವುಗಳನ್ನು ಜಾರಿಗೊಳಿಸುವುದಕ್ಕಾಗಿ ತೆರಿಗೆದಾರನ ಮೇಲೆ ಅಥವಾ ಯಾವನೇ ವ್ಯಕ್ತಿಯ ಮೇಲೆ ಮಾಡಲಾದ ಕರ ನಿರ್ಧರಣೆಗೆ ಅನ್ವಯವಾಗತಕ್ಕದ್ದಲ್ಲ.

(7) ಈ ಪ್ರಕರಣದ ಅಡಿಯಲ್ಲಿ ಕರನಿರ್ಧಾರಣೆಗಾಗಿ ಅವಧಿ ಪರಿಮಿತಿಯನ್ನು ಲೆಕ್ಕಹಾಕುವಲ್ಲಿ,

(ಎ) ಯಾವುದೇ ನ್ಯಾಯಾಲಯವು ಅಥವಾ ಯಾವುದೇ ಇತರ ಪ್ರಾಧಿಕಾರವು ನೀಡದ ಯಾವುದೇ ತಡೆಯಾಜ್ಞೆಯಿಂದಾಗಿ, ಪ್ರಶ್ನಿತ ಕರ ನಿರ್ಧಾರಣೆಯ ಸಂಬಂಧದಲ್ಲಿ ಯಾವ ಅವಧಿಯಲ್ಲಿ ವ್ಯವಹರಣೆಗಳನ್ನು ಮುಂದಕ್ಕೆ ಹಾಕಲಾಗಿದೆಯೋ ಆ ಅವಧಿಯನ್ನು ಬಿಟ್ಟು ಬಿಡತಕ್ಕದ್ದು.

(ಬಿ) ಜಂಟಿ ಆಯುಕ್ತರು ಲಿಖಿತದಲ್ಲಿ ಕಾರಣಗಳನ್ನು ದಾಖಲು ಮಾಡಿ, ಯಾವುದೇ ಪ್ರಕರಣದ ಅಥವ ಪ್ರಕರಣಗಳ ಸಂಬಂಧದಲ್ಲಿ ಆ ಅವಧಿಯನ್ನು ಬಿಟ್ಟುಬಿಡತಕ್ಕದ್ದು;

(8) ಈ ಪ್ರಕರಣದ ಮೇರೆಗೆ ಕರನಿರ್ಧರಣೆಯು, (6)ನೆಯ ಉಪಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಲಾದ ಸಮಯದೊಳಗೆ ಪೂರ್ಣಗೊಳ್ಳದಿದ್ದರೆ, ವ್ಯವಹಾರಿಯ ತನ್ನ ವಾರ್ಷಿಕ ವಿವರಪಟ್ಟಿಯಲ್ಲಿ ಘೋಷಿಸಿದ ಒಟ್ಟು ವಹಿವಾಟು ಮತ್ತು ತೆರಿಗೆಗೆ ಗುರಿಯಾಗತಕ್ಕ ವಹಿವಾಟನ್ನು ಸದರಿ ವಿವರ ಪಟ್ಟಿಯ ಆಧಾರದ ಮೇಲೆ ಆ ವರ್ಷಕ್ಕಾಗಿ ಕರನಿರ್ಧರಣೆ ಮಾಡಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ತೆರಿಗೆಯಿಂದ ತಪ್ಪಿಸಿಕೊಂಡ ವಹಿವಾಟಿನ ಕರನಿರ್ಧರಣೆ, ಸಂದಾಯ ಮತ್ತು ವಸೂಲಿ, ಅಪೀಲು ಮತ್ತು ಪುನರೀಕ್ಷಣೆ ಇವುಗಳಿಗೆ ಸಂಬಂಧಿಸಿದ ಈ ಅಧಿನಿಯಮದ ಉಪಬಂಧಗಳು ಹಾಗೆ ಭಾವಿಸಲಾದ ಕರನಿರ್ಧರಣೆಗೆ ಸೂಕ್ತ ಬದಲಾವಣೆಗಳೊಂದಿಗೆ ಅನ್ವಯವಾಗತಕ್ಕದ್ದು.

XXX XXX XXX

5-ಸಿ ಕೆಲವು ಸಂದರ್ಭಗಳಲ್ಲಿ ಕರ-ನಿರ್ಧರಣೆಗಳನ್ನು ರದ್ದುಗೊಳಿಸುವುದು.

(1) ತೆರಿಗೆದಾರನು ಕೋರಿಕೆ ನೋಟೀಸನ್ನು ಜಾರಿಮಾಡಿದ ಒಂದು ತಿಂಗಳಿನೊಳಗೆ ಅರ್ಜಿಯನ್ನು ಸಲ್ಲಿಸಿದ್ದು 5ನೇ ಪ್ರಕರಣದಡಿ ಅಗತ್ಯಪಡಿಸಲಾದಂತೆ ಹಾಜರಾಗಲು ಸಾಕಷ್ಟು ಕಾರಣಗಳಿಂದಾಗಿ ತಡೆಹಿಡಿಯಲ್ಪಟ್ಟಿದ್ದೇನೆಂಬುದಾಗಿ ಅಥವಾ ಆ ಪ್ರಕರಣದಡಿ ನೀಡಲಾದ ನೋಟೀಸನ್ನು ಆತನು ಪಡೆದುಕೊಂಡಿಲ್ಲವೆಂಬುದಾಗಿ ಅಥವಾ ಆ ಪ್ರಕರಣದಡಿ ನೀಡಲಾದ ನೋಟೀಸನ್ನು ಆತನು ಪಡೆದುಕೊಂಡಿಲ್ಲವೆಂಬುದಾಗಿ ಅಥವಾ ಅಹವಾಲನ್ನು ಹೇಳಿಕೊಳ್ಳಲು ಸೂಕ್ತವಾದ ಅವಕಾಶವನ್ನು ಆತನಿಗೆ ನೀಡಲಿಲ್ಲವೆಂಬುದಾಗಿ ತೆರಿಗೆ-ನಿರ್ಧರಣಾ ಪ್ರಾಧಿಕಾರಿಗೆ ಮನದಟ್ಟು ಮಾಡಿರುವಲ್ಲಿ, ಆತನ ತೆರಿಗೆ-ನಿರ್ಧರಣೆಯನ್ನು ರದ್ದುಗೊಳಿಸತಕ್ಕದ್ದು ಮತ್ತು 5ನೇ ಪ್ರಕರಣದ ಉಪಬಂಧಗಳಿಗನುಸಾರವಾಗಿ ಹೊಸದಾಗಿ ತೆರಿಗೆಯನ್ನು ನಿರ್ಧರಿಸುವಂತೆ ಕ್ರಮ ಕೈಗೊಳ್ಳತಕ್ಕದ್ದು:

ಪರಂತು, ಈ ಉಪ-ಪ್ರಕರಣದಡಿಯ ಯಾವ ಅರ್ಜಿಯನ್ನು ಒಟ್ಟು ಮಾರಾಟ ಹಣದ ವಿವರಪಟ್ಟಿಕೆಯಲ್ಲಿ ಒಪ್ಪಿಕೊಂಡಿರುವ ತೆರಿಗೆಯನ್ನು ಸಂದಾಯ ಮಾಡದಿದ್ದಲ್ಲಿ ತೆರಿಗೆ ನಿರ್ಧರಣಾ ಪ್ರಾಧಿಕಾರಿಯು ಪರಿಗಣಿಸತಕ್ಕದ್ದಲ್ಲ.

(2) (1)ನೇ ಉಪ-ಪ್ರಕರಣದಲ್ಲಿ ಒಳಗೊಂಡಿರುವುದು ಯಾವುದೂ, 13ನೇ ಪ್ರಕರಣದಡಿಯ ಅಪೀಲಿನ ವಸ್ತು ವಿಷಯವಾಗಿರುವ ತೆರಿಗೆ ನಿರ್ಧರಣೆಗೆ ಅನ್ವಯಿಸತಕ್ಕದ್ದಲ್ಲ.

(3) 13ನೇ ಪ್ರಕರಣದಡಿ ಯಾವ ಅಪೀಲನ್ನು ಈ ಪ್ರಕರಣದಡಿ ಹೊರಡಿಸಲಾದ ಆದೇಶದ ವಿರುದ್ಧವಾಗಿ ಸಲ್ಲಿಸತಕ್ಕದ್ದಲ್ಲ.

(4) ಈ ಪ್ರಕರಣದಡಿ ಹೊರಡಿಸಲಾದ ಪ್ರತಿಯೊಂದು ಆದೇಶವು, 14,15–ಎ, 16 ಮತ್ತು 17ನೇ ಪ್ರಕರಣಗಳ ಉಪಬಂಧಗಳಿಗೆ ಒಳಪಟ್ಟು, ಅಂತಿಮವಾಗಿರತಕ್ಕದ್ದು.

xxxxx

**6. ನಿರ್ಧರಣೆಯಿಂದ ತಪ್ಪಿಸಿಕೊಳ್ಳುವ ಸರಕುಗಳ ಪ್ರವೇಶಕ್ಕಾಗಿ ತೆರಿಗೆ ಸಂದಾಯ –** (1) ತೆರಿಗೆ ನಿರ್ಧರಣಾ ಪ್ರಾಧಿಕಾರಿಗೆ ಒಬ್ಬ ವ್ಯಾಪಾರಿಯು ಸಂಪೂರ್ಣ ವಹಿವಾಟು ಅಥವಾ ಅದರ ಯಾವುದೇ ಭಾಗ ಅಥವಾ ವ್ಯಾಪಾರಿಯು ಸ್ವತ: ತಾನೇ ಅಥವಾ ತನ್ನ ಯಜಮಾನನ ಸಲುವಾಗಿ ಅಥವಾ ಇತರ ಯಾವನೇ ವ್ಯಕ್ತಿಯ ಸಲುವಾಗಿ ಸ್ಥಳೀಯ ಪ್ರದೇಶದೊಳಗೆ ತಂದ ಅಥವಾ ತರಲು ಕಾರಣವಾದ ತೆರಿಗೆಗೊಳಪಡುವ ಸರಕುಗಳ ಮೌಲ್ಯ ಅಥವ ಸ್ಥಳೀಯ ಪ್ರದೇಶಗಳೊಳಗೆ ಮಾರಾಟಕ್ಕಾಗಿ ಬರುವ ಅಂಥ ಸರಕುಗಳನ್ನು ತೆಗೆದುಕೊಂಡ ಅಥವಾ ತೆಗೆದುಕೊಳ್ಳಲು ಹಕ್ಕುಳ್ಳ ಯಾವನೇ ವ್ಯಕ್ತಿಯು ಯಾವುದೇ ಅವಧಿಯ ಸಂಬಂಧದಲ್ಲಿ ತೆರಿಗೆ ಸಂದಾಯದ ಅತೆರಿಗೆ ನಿರ್ಧಾರಣೆಯನ್ನು ತಪ್ಪಿಸಿಕೊಂಡರುವವನೆಂದು ಅಥವಾ ಕಡಿಮೆ ತೆರಿಗೆ ನಿರ್ಧರಣೆ ಮಾಡಲಾಗಿದೆಯೆಂದು ಅಥವ ಈ ಅಧಿನಿಯಮದ ಅಡಿಯಲ್ಲಿ ತೆರಿಗೆ ನಿರ್ಧರಣೆ ಮಾಡಬೇಕಾಗಿರುವಂಥ ದರಕ್ಕಿಂತ ಕಡಿಮೆ ದರದಲ್ಲಿ ತೆರಿಗೆ ನಿರ್ಧರಣೆ ಮಾಡಲಾಗಿದೆ ಎಂದು ಅಥವ ಅದರ ಸಂಭಂಧದಲ್ಲಿ ಕಡಿತ ಅಥವಾ ವಿನಾಯಿತಿಯನ್ನು ತಪ್ಪಾಗಿ ಅನುಮತಿಸಲಾಗಿದೆ ಎಂದು ನಂಬಲು ಸಾಕಷ್ಟು ಕಾರಣಗಳಿರುವಲ್ಲಿ ತೆರಿಗೆ ನಿರ್ಧರಣಾ ಪ್ರಾಧಿಕಾರಿಯು, ಅಂಥ ತಪ್ಪಿಸಿಕೊಂಡ ವಹಿವಾಟಿನ ಸಂಪೂರ್ಣ ಅಥವಾ ಭಾಗವು ಅಥವಾ ಸಂದರ್ಭಾನುಸಾರ ತೆರಿಗೆಗೊಳಪಡುವ ಸರಕುಗಳ ಮೌಲ್ಯವು ಮೂಲ ತೆರಿಗೆ ನಿರ್ಧರಣೆ ಅಥವಾ ಮರು ತೆರಿಗೆ ನಿರ್ಧರಣೆಯ ಸಮಯದಲ್ಲಿ ಸದರಿ ಪ್ರಧಿಕಾರದ ಮುಂದೆ ಈಗಾಗಲೇ ಸಲ್ಲಿಸಲಾಗಿದ್ದರೂ ಸಹ ಅಂದರೆ (3) ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು ತೆರಿಗೆಯು ಸಂಬಂಧಪಡುವಂಥ ವರ್ಷವು ಮುಕ್ತಾಯವಾದಂದಿನಿಂದ ಎಂಟು ವರ್ಷಗಳ ಅವಧಿಯೊಳಗಾಗಿ, ವ್ಯಾಪಾರಿಗೆ ನೋಟಿಸನ್ನು ಜಾರಿ ಮಾಡಿದ ನಂತರ ಮತ್ತು ಅವನು ಅವಶ್ಯವೆಂದು ಪರಿಗಣಿಸಬಹುದಾದ ಅಂಥ ವಿಚಾರಣೆಯನ್ನು ಮಾಡಿದ ನಂತರ ಅಂಥ ವಹಿವಾಟು ಅಥವ ಸಂದರ್ಭಾನುಸಾರ ಅಂಥ ಸರಕುಗಳ ಖರೀದಿ ಮೌಲ್ಯದ ಸಂಬಂಧದಲ್ಲಿ ವ್ಯಾಪಾರಿಯು ಸಂದಾಯ ಮಾಡಬೇಕಾಗಿರುವ ತೆರಿಗೆಯನ್ನು ತೆರಿಗೆ ನಿರ್ಧರಣಾ ಅಥವಾ ಮರು ತೆರಿಗೆ ನಿರ್ಧರಣೆ ಮಾಡುವುದನ್ನು ಮುಂದುವರೆಸಬಹುದು.

(2) (1)ನೇ ಉಪಪ್ರಕರಣದ ಮೇರೆಗೆ ಕರನಿರ್ಧರಣೆ ಮಾಡುವಲ್ಲಿ ಕರನಿರ್ಧರಣಾ ಪ್ರಾಧಿಕಾರಿಯು, ಕರನಿರ್ಧರಣೇಯಿಂದ ತಪ್ಪಿಸಿಕೊಂಡಿರುವುದು ನೋಂದಾಯಿತ ವ್ಯಾಪಾರಿಯು ಅಂಥ ಸರಕುಗಳ ಬಗ್ಗೆ ಉದ್ದೇಶಪೂರ್ವಕವಾಗಿ ಬಹಿರಂಗಪಡಿಸದಿದ್ದುದರಿಂದ ಉಂಟಾದುದೆಂದು ಮನದಟ್ಟಾದರೆ (1)ನೇ ಉಪಪ್ರಕರಣದ ಮೇರೆಗೆ ಕರನಿರ್ಧರಿಸಿದ ತೆರಿಗೆಯ ಜೊತೆಗೆ ಹಾಗೆ ನಿರ್ಧರಿಸಿದ ತೆರಿಗೆಯ ಒಂದೂವರೆಯಷ್ಟನ್ನು ಮೀರದಂತೆ ದಂಡವನ್ನು ಸಂದಾಯ ಮಾಡುವಂತೆ ಅವನನ್ನು ನಿರ್ದೇಶಿಸಬಹುದು.

ಪರಂತು, ಈ ಉಪಪ್ರಕರಣದ ಮೇರೆಗೆ ಯಾವುದೇ ದಂಡವನ್ನು ಬಾಧಿತನಾದ ವ್ಯಾಪಾರಿಗೆ ಅಂಥ ವಿಧಿಸುವಿಕೆಯ ವಿರುದ್ಧ ಕಾರಣವನ್ನು ತೋರಿಸಲು ಯುಕ್ತ ಅವಕಾಶ ಕೊಟ್ಟ ಹೊರತು ಸಂದಾಯ ಮಾಡುವಂತೆ ನಿರ್ದೇಶಿಸತಕ್ಕದ್ದಲ್ಲ.

(3) ಈ ಪ್ರಕರಣದ ಮೇರೆಗೆ ಕರನಿರ್ಧರಣೆಗಾಗಿ ಕಾಲ ಪರಿಮಿತಿಯ ಅವಧಿಯನ್ನು ಲೆಕ್ಕಹಾಕುವಲ್ಲಿ ಯಾವುದೇ ನ್ಯಾಯಾಲಯದಿಂದ ಅಥವಾ ಇತರ ಪ್ರಾಧಿಕಾರಿಯಿಂದ ಕೊಡಲಾದ ಯಾವುದೇ ತಡೆಯಾದೇಶದ ಕಾರಣಕ್ಕಾಗಿ ಅಥವಾ ಇರುವ ಅಪೀಲು ಅಥವಾ ಇತರ ವ್ಯವಹರಣೆಯ ಇತ್ಯರ್ಥದಲ್ಲಿ ಸಂಗತಿಯ ಕಾರಣಕ್ಕಾಗಿ ಕರನಿರ್ಧರಣೆಯನ್ನು ಮುಂದೂಡಲಾಗಿರುವ ಕಾಲವನ್ನು ಬಿಟ್ಟುಬಿಡತಕ್ಕದ್ದು.

ಪರಂತು, ಈ ಪ್ರಕರಣದಲ್ಲಿರುವುದಾವುದೂ ತೆಗೆದುಕೊಳ್ಳಬಹುದಾದ ಯಾವುದೇ ಕ್ರಮ ಅಥವಾ ಮಾಡಬಹುದಾದ ಯಾವುದೇ ಆದೇಶ, ತೆರಿಗೆ ನಿರ್ಧರಣೆ ಅಥವಾ ಮರು ತೆರಿಗೆ ನಿರ್ಧರಣೆಯನ್ನು ಯಾವ ಅವಧಿಯೊಳಗೆ ಮಾಡಬೇಕೆಂಬ ಕಾಲಮಿತಿಯು ನಿರ್ಣಯ ನಿರ್ದೇಶನ ಅಥವಾ 13,14,15,15–ಎ, 16ನೇ ಪ್ರಕರಣಗಳ ಅಡಿಯಲ್ಲಿ ಮಾಡಿದ ಆದೇಶ ಅಥವಾ ಸರ್ವೋಚ್ಚ ನ್ಯಾಯಾಲಯ, ಉಚ್ಚ ನ್ಯಾಯಾಲಯ ಅಥವಾ ಇತರ ಯಾವುದೇ ನ್ಯಾಯಾಲಯಗಳಿಂದ ಮಾಡಲಾದ ಯಾವುದೇ ತೀರ್ಪು ಅಥವಾ ಆಜ್ಞೆಯ ಪರಿಣಾಮವಾಗಿ ಅಥವಾ ಅದನು ಪರಿಣಾಮಕಾರಿಗೊಳಿಸಲು ಯಾವನೇ ತೆರಿಗೆದಾರ ಅಥವಾ ಇತರ ವ್ಯಕ್ತಿಯ ಬಗ್ಗೆ ಮಾಡಿದ ತೆರಿಗೆ ನಿರ್ಧರಣೇ ಅಥವಾ ಮರು ತೆರಿಗೆ ನಿರ್ಧರಣೆಗೆ ಅನ್ವಯಿಸತಕ್ಕದ್ದಲ್ಲ–

xxxxx

**7. ಮುಂಗಡವಾಗಿ ತೆರಿಗೆಯ ಸಂದಾಯ.–** (1) ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು, ಪ್ರತಿಯೊಬ್ಬ ನೊಂದಾಯಿತ ವ್ಯಾಪಾರಿಯು (ಈ ಅಧಿನಿಯಮದಡಿ ತನ್ನನ್ನು ನೋಂದಾಯಿಸಿಕೊಳ್ಳಲು ಬದ್ಧನಾಗಿರುವಂಥ ಪ್ರತಿಯಬ್ಬ ವ್ಯಾಪಾರಿಯು) ನಿಮಯಮಿಸಬಹುದಾದಂಥ ವಿವರಗಳನ್ನು ಒಳಗೊಂಡಿರುವ ಹೇಳಿಕೆಯನ್ನು ಪ್ರತಿ ತಿಂಗಳೂ ತೆರಿಗೆ ನಿರ್ಧರಣೆ ಪ್ರಾಧಿಕಾರಿಗೆ ಕಳುಹಿಸತಕ್ಕದ್ದು ಮತ್ತು ಸ್ಥಳೀಯ ಪ್ರದೇಶದೊಳಗೆ ಹಿಂದಿನ ತಿಂಗಳ ಅವಧಿಯಲ್ಲಿ ತಾನು ತಂದಿರುವ (ಸರಕುಗಳ) ಆಧಾರದ ಮೇಲೆ ತಾನು ಸಂದಾಯ ಮಾಡಬೇಕಾದ ತೆರಿಗೆಯ ಪೂರ್ಣ ಮೊಬಲಗನ್ನು ಮುಂಗಡವಾಗಿ ಸಂದಾಯ ಮಾಡತಕ್ಕದ್ದು ಮತ್ತು ಹಾಗೆ ಸಂದಾಯ ಮಾಡಬೇಕಾದ ಮೊಬಲಗನ್ನು ಮುಂಗಡವಾಗಿ ಸಂದಾಯ ಮಾಡತಕ್ಕದ್ದು ಮತ್ತು ಹಾಗೆ ಸಂದಾಯ ಮಾಡಬೇಕಾದ ಮೊಬಲಗನ್ನು, 8ನೇ ಪ್ರಕರಣದ (4)ನೇ ಉಪ-ಪ್ರಕರಣದ ಉದ್ದೇಶಗಳಿಗಾಗಿ ಅಂಥ ವ್ಯಾಪಾರಿಯಿಂದ ಈ ಅಧಿನಿಯಮದಡಿ ಬಾಕಿಯಿರುವ ಮೊಬಲಗು ಎಂಬುದಾಗಿ ಪರಿಗಣಿಸತಕ್ಕದ್ದು.

(2) ಸದರಿ ಉಪ-ಪ್ರಕರಣಗಲ್ಲಿ ನಿರ್ದಿಷ್ಟಪಡಿಸಲಾದ ಅವಧಿ ಮುಕ್ತಾಯವಾದ ತರುವಾಯ ಹತ್ತು ದಿನಗಳಿಗೂ ಮೀರಿ (1) ನೇ ಉಪ ಪ್ರಕರಣದನುಸಾರವಾಗಿ ತೆರಿಗೆ ಸಂದಾಯ ಮಾಡಲು ತಪ್ಪಿದರೆ, ವ್ಯಾಪಾರಿಯು ದಂಡನೆಯ ರೂಪದಲ್ಲಿ ಹಾಗೆ ಸಂದಾಯ ಮಾಡಲು ತಪ್ಪಿದ ಅವಧಿಯು ಮುಂದುವರಿದ ಪ್ರತಿ ತಿಂಗಳಿಗೆ ಅಥವಾ ಅದರ ಭಾಗಕ್ಕೆ ಸಂದಾಯಮಾಡಬೇಕಾದ ತೆರಿಗೆಯಲ್ಲಿ ಶೇಕಡಾ ಎರಡರಷ್ಟಕ್ಕೆ ಸಮನಾದ ಮೊತ್ತವನ್ನು ಸಂದಾಯ ಮಾಡತಕ್ಕದ್ದು.

(3) ವರ್ಷದ ಕೊನೆಯಲ್ಲಿ ಯಾವನೇ ನೋಂದಾಯಿತ ವ್ಯಾಪಾರಿಯು ಯಾವುದೇ ತಿಂಗಳಿಗಾಗಿ ಅಥವಾ ಒಟ್ಟಿನಲ್ಲಿ ಒಂದು ಪೂರ್ಣ ವರ್ಷಕ್ಕಾಗಿ ಮುಂಗಡವಾಗಿ ಸಂದಾಯ ಮಾಡಿದ ತೆರಿಗೆ ಮೊಬಲಗು ಸಂದರ್ಭಾನುಸಾರ ತಿಂಗಳಿಗಾಗಿ ಸಂದಾಯ ಮಾಡಬೇಕಾದ ಅಥವಾ ತೆರಿಗೆಯನ್ನು ಅಂತಿಮವಾಗಿ ನಿರ್ಧರಿಸಲಾದಂತೆ ಪೂರ್ಣ ವರ್ಷಕ್ಕಾಗಿ ಸಂದಾಯ ಮಾಡಬೇಕಾದ ತೆರಿಗೆಗಿಂತ ಶೇಕಡಾ ಹದಿನೈದಕ್ಕಿಂತ ಹೆಚ್ಚಿಗೆಯಾಗಿ ಕಡಿಮೆಯಿರುವುದೆಂದು ಕಂಡುಬಂದಲ್ಲಿ ಸಂದಾಯ ಮಾಡಿದ ತೆರಿಗೆಯ ಕರನಿರ್ಧಾರಣಾ ಪ್ರಾಧಿಕಾರಿಯು ಸಂದರ್ಭಾನುಸಾರ ಆ ತಿಂಗಳಿಗಾಗಿ ಅಥವಾ ಪೂರ್ಣ ವರ್ಷಕ್ಕಾಗಿ ಸಂದಾಯ ಮಾಡಬೇಕಾದ ತೆರಿಗೆಗಿಂತ ಕಡಿಮೆ ಬೀಳುವಷ್ಟರ ಒಂದೂವರೆಯಷ್ಟಕ್ಕೆ ಮೀರದ ಮೊತ್ತವನ್ನು ತೆರಿಗೆಯ ಜೊತೆಗೆ ದಂಡ ರೂಪದಲ್ಲಿ ಸಂದಾಯ ಮಾಡಬೇಕೆಂದು ಅಂಥ ವ್ಯಾಪಾರಿಗೆ ನಿರ್ದೇಶಿಸಬಹುದು.

ಪರಂತು, ಈ ಉಪಪ್ರಕರಣದ ಮೇರೆಗೆ ಯಾವುದೇ ದಂಡವನ್ನು ಬಾಧಿತನಾದ ವ್ಯಾಪಾರಿಗೆ ಅಂಥ ವಿಧಿಸುವಿಕೆಯ ವಿರುದ್ಧ ಕಾರಣವನ್ನು ತೋರಿಸಲು ಯುಕ್ತ ಅವಕಾಶ ಕೊಟ್ಟ ಹೊರತು ಸಂದಾಯ ಮಾಡುವಂತೆ ನಿರ್ದೇಶಿಸತಕ್ಕುದ್ದಲ್ಲ.

(4) ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ಮೊದಲು (1)ನೇ ಉಪ-ಪ್ರಕರಣದ ಅಡಿಯಲ್ಲಿ, ಒಬ್ಬ ವ್ಯಾಪಾರಿಯಿಂದ ಅಂಥ ವಿವರಣೆಯನ್ನು ಸಲ್ಲಿಸಲಾಗದಿದ್ದರೆ ಅಥವಾ ಅವನಿಂದ ಸಲ್ಲಿಸಲಾದ ವಿವರವು ಸರಿ ಇಲ್ಲವೆಂದು ಅಥವಾ ಅಪೂರ್ವವೆಂದು ಕರನಿರ್ಧರಣಾ ಪ್ರಾಧಿಕಾರಕ್ಕೆ ಕಂಡುಬಂದಲ್ಲಿ, ಕರನಿರ್ಧರಣಾ ಪ್ರಾಧಿಕಾರವು, ಅಂಥ ಕರ ನಿರ್ಧರಣೆಗಾಗಿ ಕಾರಣಗಳನ್ನು ದಾಖಲಿಸಿ, ತನ್ನ ತೀರ್ಪಿಗೆ ಸರಿ ಕಂಡಂತೆ ಆ ತಿಂಗಳಿಗಾಗಿ ತಾತ್ಕಾಲಿಕವಾಗಿ ವ್ಯಾಪಾರಿ ಎಂಬಂತೆ ನಿರ್ಧರಿಸಬಹುದು ಮತ್ತು ಬೇಡಿಕೆಯನ್ನು ಮುಂದಿಟ್ಟು ಅಂಥ ಕರನಿರ್ಧರಣೆಯ ಆಧಾರದ ಮೇಲೆ ತೆರಿಗೆಯುನ್ನು ಸಂಗ್ರಹಿಸಬಹುದು.

xxxxx

**8. ತೆರಿಗೆ ಸಂದಾಯ ಮತ್ತು ವಸೂಲಿ.–** (1) ಈ ಅಧಿನಿಯಮದ ಮೇರೆಗಿನ ತೆರಿಗೆಯನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಕಂತುಗಳಲ್ಲಿ ಯಾವುದುದರೂ ಇದ್ದರೆ ಮತ್ತು ಅಂಥ ಕಾಲದೊಳಗೆ ಸಂದಾಯಮಾಡತಕದಕ್ಕದ್ದು.

ಪರಂತು ಆಯುಕ್ತರು ಅಧಿಸೂಚಿಸಬಹುದಾದಂತೆ, ಮಾಲೀಕರುಗಳ ನಿರ್ದಿಷ್ಟ ವರ್ಗವು, ಈ ಅಧಿನಿಯಮದಡಿಯಲ್ಲಿ ಬಾಕಿಯಿರುವ ತೆರಿಗೆ ಅಥವಾ ಯಾವುದೇ ಇತರ ಮೊತ್ತವನ್ನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ರೀತಿಯಲ್ಲಿ, ವಿದ್ಯುನ್ಮಾನ ವಿಧಾನದಲ್ಲಿ ಅಂತರ್ಜಾಲದ ಮೂಲಕ ಜಮೆ ಮಾಡತಕ್ಕದ್ದು.

(2) (1)ನೇ ಉಪಪ್ರಕರಣಕ್ಕನುಸಾರವಾಗಿ ಸಂದಾಯ ಮಾಡಲು ತಪ್ಪಿದಲ್ಲಿ;–

(i) ಹಾಗೆ ಕೊಡಲು ತಪ್ಪಿದ ದಿನಾಂಕದಂದು ಬಾಕಿ ನಿಂತಿರುವ ಪೂರ್ಣ ಮೊಬಲಗು ಕೂಡಲೆ ಬಾಕಿಯಾಗತಕ್ಕುದು. ಮತ್ತು ಈ ಅಧಿನಿಯಮದ ಮೇರೆಗೆ ತೆರಿಗೆಯನ್ನು ಸಂದಾಯ ಮಾಡಲು ಹೊಣೆಯಾಗಿರುವ ವ್ಯಕ್ತಿ ಅಥವಾ ವ್ಯಕ್ತಿಗಳ ಸ್ವತ್ತಿನ ಮೇಲೆ ಅದು ಋಣಭಾರವಾಗಿರತಕ್ಕುದ್ದು.

(ii) ಈ ಅಧಿನಿಯಮದ ಮೇರೆಗೆ ಅತೆರಿಗೆಯನ್ನು ಸಂದಾಯ ಮಾಡಲು ಹೊಣೆಯಾಗಿರುವ ವ್ಯಕ್ತಿ ಅಥವಾ ವ್ಯಕ್ತಿಗಳು; (1)ನೇ ಉಪಪ್ರಕರಣದ ಮೇರೆಗೆ ನಿಯಮಿಸಲಾದ ಕಾಲವು ಮುಕ್ತಾಯವಾದ ತರುವಾಯ ಮೊದಲು ಮೂರು ತಿಂಗಳಿಗಾಗಿ ಪ್ರತಿ ತಿಂಗಳು ಸಂದಾಯ ಮಾಡದೆ ಉಳಿದ ತೆರಿಗೆಯ ಮೊಬಲಗಿನ ಶೇಕಡಾ ಒಂದರಷ್ಟಕ್ಕೆ; ಮತ್ತು ಹಿಂದೆ ಹೇಳಿದಂತೆ ಮೊದಲ ಮೂರು ತಿಂಗಳ ತರುವಾಯದ ಪ್ರತಿ ತಿಂಗಳ ಅಂಥ ಮೊಬಲಗಿನ ಶೇಕಡಾ ಎರಡೂವರೆಯಷ್ಟಕ್ಕೆ ಸಮನಾದ ದಂಡವನ್ನು ಸಂದಾಯ ಮಾಡತಕ್ಕುದು.

**ವಿವರಣೆ.**–(i)ನೆಯ ಖಂಡದ ಉದ್ದೇಶಗಳಿಗಾಗಿ ತಿಂಗಳಿನ ಒಂದು ಭಾಗಕ್ಕಾಗಿ ಸಂದಾಯ ಮಾಡಬೇಕಾದ ದಂಡವನ್ನು ಪ್ರಮಾಣಾನುಸಾರವಾಗಿ ನಿರ್ಧರಿಸತಕ್ಕುದು.

(3) (2)ನೇ ಉಪಪ್ರಕರಣದಲ್ಲಿ ಏನೇ ಅಡಕವಾಗಿದ್ದಾಗ್ಯೂ ರಾಜ್ಯ ಸರ್ಕಾರವು ನಿಯಮಿಸಬಹುದಾದಂಥ ಷರತ್ತುಗಳಿಗೊಳಪಟ್ಟು ಯಾವನೇ ವ್ಯಕ್ತಿಯು ಅಥವಾ ವ್ಯಕ್ತಿಗಳ ವರ್ಗವು ಯಾವುದೇ ಅವಧಿಗೆ ಸಂಬಂಧಿಸಿದಂತೆ ಸಂದಯ ಮಾಡಬೇಕಾದ ದಂಡದ ಪೂರ್ಣ ಅಥವಾ ಯಾವುದೇ ಭಾಗವನ್ನು ಮಾಡಬಹುದು.

(4) ನಿರ್ಧರಿಸಲಾದ ಯಾವುದೇ ತೆರಿಗೆ ಅಥವಾ ಈ ಅಧಿನಿಯಮದ ಮೇರೆಗೆ ನೋಂದಾಯಿತವಾದ ವ್ಯಾಪಾರಿಯಿಂದ ಬಾಕಿಯಿರುವ ಯಾವುದೇ ಇತರ ಮೊಬಲಗನ್ನು ಸಂಗ್ರಹಣೆಯ ಯಾವುದೇ ಇತರ ವಿಧಾನಕ್ಕೆ ಬಾಧಕವಾಗದಂತೆ;

(ಎ) ಅದು ಭೂಕಂದಾಯದ ಬಾಕಿಯಾಗಿದ್ದರೆ ಹೇಗೋ ಹಾಗೆ; ಅಥವಾ

(ಬಿ)ನಿಯಮಿಸಬಹುದಾದಂಥ ನಿಯಮಗಳಿಗನುಸಾರವಾಗಿ ನಿಯಮಿಸಲಾದ ಅಧಿಕಾರಿಯು, ಅಂಥ ವ್ಯಾಪಾರಿಯ ಅಥವಾ ಯಾವನೇ ಇತರ ವ್ಯಕ್ತಿಯ ಯಾವುದೇ ಸ್ವತ್ತನ್ನು ಜಪ್ತಿ ಮಾಡುವ ಮತ್ತುಮಾರಾಟ ಮಾಡುವ ಮೂಲಕ ಅಥವಾ ಜಪ್ತಿ ಮಾಡದೆ ಅದನ್ನು ಮಾರಾಟ ಮಾಡುವ ಮೂಲಕ;

(ಸಿ) 1973ರ ದಂಡ ಪ್ರಕ್ರಿಯಾ ಸಂಹಿತೆಯಲ್ಲಿ (1974ರ ಕೇಂದ್ರಾಧಿನಿಯಮ 2) ಏನೇ ಅಡಕವಾಗಿದ್ದಾಗ್ಯೂ ಯಾವನೇ ಮ್ಯಾಜಿಸ್ಟ್ರೇಟನಿಗೆ ಅರ್ಜಿ ಸಲ್ಲಿಸುವ ಮೂಲಕ ಅಂಥ ಮ್ಯಾಜಿಸ್ಟ್ರೇಟನು ದಂಡ ವಿಧಿಸಿದ್ದರೆ ಹೇಗೋ ಹಾಗೆ,

–ಅಂಥ ಮ್ಯಾಜಿಸ್ಟ್ರೇಟನ ಮೂಲಕ ವಸೂಲಿ ಮಾಡಬಹುದು;

ಪರಂತು, ಈ ಅಧಿನಿಯಮದ ಮೇರೆಗೆ ಮಾಡಲಾದ ಯಾವುದೇ ಆದೇಶದ ಬಗ್ಗೆ ಅಥವಾ ಪುನರೀಕ್ಷಣೆಗಾಗಿ ನೋಂದಾಯಿತ ವ್ಯಾಪಾರಿಯು ಅಪೀಲು ಅಥವಾ ಪುನರೀಕ್ಷಣೆಗಾಗಿ ಅರ್ಜಿಯನ್ನು ಮತ್ತು ತೆರಿಗೆ ಅಥವಾ ಇತರ ಮೊಬಲಗಿನ ಸಂದಾಯದ ಬಗ್ಗೆ ಅಪೀಲು ಅಥವಾ ಪುನರೀಕ್ಷಣಾ ಪ್ರಾಧಿಕಾರಿಯು ಮಾಡಿದ ಆದೇಶವನ್ನು ಪಾಲಿಸಿರುವಲ್ಲಿ ಅಂಥ ಅಪೀಲನ್ನು ಅಥವಾ ಪುನರೀಕ್ಷಣಾ ಅರ್ಜಿಯ ವಿಲೆ ಆಗುವ ತನಕ ಈ ಉಪಪ್ರಕರಣದ ಮೇರೆಗೆ ವಸೂಲಿಗಾಗಿ ಯಾವುದೇ ವ್ಯವಹರಣೆಗಳನ್ನು ಕೈಗೊಳ್ಳತಕ್ಕುದ್ದಲ್ಲ ಅಥವಾ ಅವುಗಳನ್ನು ಮುಂದುವರಿಸತಕ್ಕುದಲ್ಲ.

xxxxx

**14. ಅಪೀಲು ನ್ಯಾಯಾಧಿಕರಣಕ್ಕೆ ಅಪೀಲು.–** (1) ಈ ಬಗ್ಗೆ ರಾಜ್ಯ ಸರ್ಕಾರದಿಂದ ಅಧಿಕಾರ ಪಡೆದ ಯಾರೇ ಅಧಿಕಾರಿಯು ಅಥವಾ 13ನೇ ಪ್ರಕರಣದಡಿ ಅಪೀಲು ಪ್ರಾಧಿಕಾರವು ಹೊರಡಿಸಿದ ಆದೇಶದ ಬಗ್ಗೆ ಆಕ್ಷೇಪಣೆಯನ್ನು ಮಾಡುವ ಯಾರೇ ಇತರ ವ್ಯಕ್ತಿಯು ಅಥವಾ 15ನೇ ಪ್ರಕರಣದ (3)ನೇ ಮತ್ತು (4)ನೇ ಪ್ರಕರಣದಡಿ ಪುನರೀಕ್ಷಣಾ ಪ್ರಾಧಿಕಾರಿಯ ಹೊರಡಿಸಿದ ಆದೇಶದ ವಿರುದ್ಧವಾಗಿ ಆತನಿಗೆ ಆ ಆದೇಶವನ್ನು ಕಳುಹಿಸಿದ ದಿನಾಂಕದಿಂದ ಅರವತ್ತು ದಿನಗಳ ಅವಧಿಯೊಳಗೆ ಅಪೀಲು ವಿಚಾರಣಾ ನ್ಯಾಯಧೀಕರಣಕ್ಕೆ ಅಪೀಲನ್ನು ಸಲ್ಲಿಸಬಹುದು.

(2) ಅಪೀಲು ವಿಚಾರಣಾ ನ್ಯಾಯಮಂಡಲಿಯು, (1)ನೇ ಉಪ–ಪ್ರಕರಣದಲ್ಲಿ ಉಲ್ಲೇಖಿಸಲಾದ ಅರವತ್ತು ದಿನಗಳ ಅವಧಿಯ ತರುವಾಯ ಸಲ್ಲಿಸಿದ ಅಪೀಲನ್ನು ಅಪೀಲುದಾರರು ಆ ಅವಧಿಯೊಳಗೆ ಅಪೀಲನ್ನು ಸಲ್ಲಿಸದೇ ಇರಲು ಸಾಕಷ್ಟು ಕಾರಣಗಳಿದ್ದವು ಎಂಬುದು ಆತನಿಗೆ ಮನವರಿಕೆಯಾದರೆ, ಸ್ವೀಕರಿಸಬಹುದು.

(2ಎ) (1)ನೇ ಉಪ–ಪ್ರಕರಣದ ಅಡಿಯಲ್ಲಿ ಅಧಿಕೃತಗೊಂಡ ಅಧಿಕಾರಿ ಅಥವಾ ಯಾರ ವಿರುದ್ಧ ಅಪೀಲು ಹೂಡಲಾಗಿದೆಯೋ ಆ ವ್ಯಕ್ತಿಯು, ಸಂದರ್ಭಾನುಸಾರ, ನೋಟೀಸು ಸ್ವೀಕರಿಸಿದ್ದರ ಮೇಲೆ, ಡೆಪ್ಯೂಟಿ ಕಮೀಷನರ್ ಅಥವ ಜಂಟಿ ಕಮೀಷನರ್ ಅವರ ಆದೇಶದ ವಿರುದ್ಧ (1)ನೇ ಉಪ–ಪ್ರಕರಣದ ಅಡಿಯಲ್ಲಿ ಅಪೀಲು ಹೂಡಲಾಗಿದ್ದಲ್ಲಿ, ಇತರ ಪಕ್ಷಕಾರರಿಂದ, ಅಂಥ ಆದೇಶದ ವಿರುದ್ಧ ಅಥವಾ ಅದರ ಯಾವುದೇ ಭಾಗದ ವಿರುದ್ಧ ಅವನು ಅಪೀಲು ಹೂಡದಿರಲು ಏನೇ ಇದ್ದರೂ, ಅಪೀಲಿನ ಅಂತಿಮ ಸುನಾವಣೆಗೆ ಮೊದಲು ಯಾವುದೇ ಸಮಯದಲ್ಲಿ, ಪಾಟೀ ಸವಾಲಿನ ಒಂದು ವಿವರಣ ಪತ್ರವನ್ನು , ಸಂದರ್ಭಾನುಸಾರ ಡೆಪ್ಯೂಟಿ ಕಮೀಷನರ್ ಅಥವ ಜಂಟಿ ಕಮೀಷನರ್ ರ ಆದೇಶದ ಯಾವುದೇ ಭಾಗದ ವಿರುದ್ಧ, ನಿರ್ದಿಷ್ಟ ರೀತಿಯಲ್ಲಿ ಪರಿಶೀಲಿಸುವುದು ಮತ್ತು ಅಂಥ ವಿವರಣ ಪತ್ರವನ್ನು (1)ನೇ ಉಪಪ್ರಕರಣದಲ್ಲಿ ನಿರ್ಧಿಷ್ಟಪಡಿಸಿದ ಸಮಯದೊಳಗೆ ಹಾಜರುಪಡಿಸುವ ಅಪೀಲಾಗಿದ್ದಲ್ಲಿ ಆ ಅಪೀಲು.

(3) ಅಪೀಲು ಅಥವಾ ಎದುರು ಆಕ್ಷೇಪಣೆಗಳ ವಿವರಣ ಪತ್ರವು ನಿಯಮಿಸಲಾದ ನಮೂನೆಯಲ್ಲಿರತಕ್ಕದ್ದು ಮತ್ತು ನಿಯಮಿಸಲಾದ ವಿಧಾನದಲ್ಲಿ ಸತ್ಯಾಪನೆ ಮಾಡತಕ್ಕದ್ದು ಮತ್ತು (1)ನೇ ಉಪ–ಪ್ರಕರಣದಡಿ ರಾಜ್ಯ ಸರ್ಕಾರವು ಪ್ರಾಧಿಕೃತಗೊಳಿಸಲಾದ ಅಧಿಕಾರಿಯನ್ನು ಹೊರತುಪಡಿಸಿ, ಇತರ ಯಾವನೇ ವ್ಯಕ್ತಿಯು ಸಲ್ಲಿಸಿದ ಅಪೀಲಿನ ಸಂದರ್ಭದಲ್ಲಿ, ಆಕ್ಷೇಪಿಸಲಾದ ತೆರಿಗೆ ನಿರ್ಧರಣೆ ಮೊಬಲಗಿನ ಶೇಕಡಾ ಎರಡರಷ್ಟಕ್ಕೆ ಸಮಾನವಾದ ಶುಲ್ಕವನ್ನು ಅದು ಒಳಗೊಂಡಿರತಕ್ಕದ್ದು, ಪರಂತು ಯಾವ ಸಂದರ್ಭದಲ್ಲೂ ಸಂದಾಯ ಮಾಡತಕ್ಕ ಮೊಬಲಗು, ಒಂದುನೂರು ರೂಪಾಯಿಗಳಿಗಿಂತ ಕಡಿಮೆಯಾಗಿರಬಾರದು ಅಥವ ಒಂದು ಸಾವಿರ ರೂಪಾಯಿಗಳಿಗಿಂತ ಹೆಚ್ಚುಗೆಯಾಗಿರಬಾರದು

xxxxx

**17. ತಪ್ಪುಗಳನ್ನು ಸರಿಪಡಿಸುವಿಕೆ.–** (1) ದಾಖಲೆಯಿಂದ ಸ್ಪಷ್ಟವಾಗಿ ಕಂಡು ಬರುವ ಯಾವುದೇ ತಪ್ಪನ್ನು ಸರಿಪಡಿಸುವ ಉದ್ದೇಶದಿಂದ ನಿರ್ಧರಣಾ ಪ್ರಾಧಿಕಾರಿಯು ಅಪೀಲು ಪ್ರಾಧಿಕಾರ ಅಥವಾ ಪುನರೀಕ್ಷಣ ಪ್ರಾಧಿಕಾರವು ತಾನು ಮಾಡಿದ ಆದೇಶದ ದಿನಾಂಕದಿಂದ ಐದು ವರ್ಷಗಳೊಳಗೆ ಯಾವುದೇ ಕಾಲದಲ್ಲಿ ಅಂಥ ಆದೇಶವನ್ನು ತಿದ್ದುಪಡಿ ಮಾಡಬಹುದು.

ಪರಂತು, ಒಂದು ನಿರ್ಧರಣೆಯನ್ನು ಹೆಚ್ಚಿಸುವ ಅಥವಾ ಅನ್ಯಥಾ ತೆರಿಗೆದಾರನ ಹೊಣೆಯನ್ನು ಹೆಚ್ಚಿಸುವ ಪರಿಣಾಮವಿರುವ ತಿದ್ದುಪಡಿಯನ್ನು ಸಂದರ್ಭಾನುಸಾರ ನಿರ್ಧರಣಾ ಪ್ರಾಧಿಕಾರಿ, ಅಪೀಲು ಪ್ರಾಧಿಕಾರ ಅಥವಾ ಪುನರೀಕ್ಷಿಸುವ ಪ್ರಾಧಿಕಾರವು ಹಾಗೆ ಮಾಡುವ ತನ್ನ ಆಶಯದ ಬಗ್ಗೆ ತೆರಿಗೆದಾರನಿಗೆ ನೋಟೀಸನ್ನು ಮತ್ತು ತೆರಿಗೆದಾರನಿಗೆ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶ ಕೊಟ್ಟ ಹೊರತು ಮಾಡತಕ್ಕುದಲ್ಲ.

(2) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿತವಾದ ಆದೇಶಕ್ಕೆ ಸಂಬಂಧಿಸಿದ ಅಪೀಲು ಅಥವಾ ಪುನರೀಕ್ಷಣೆಯ ಮೂಲಕ ಯಾವುದೇ ವ್ಯವಹರಣೆಗಳಲ್ಲಿ ಆದೇಶವನ್ನು ಪರಿಗಣಿಸಿದಲ್ಲಿ ಮತ್ತು ತೀರ್ಮಾನಿಸಿದಲ್ಲಿ ಅಂಥ ಆದೇಶವನ್ನು ಮಾಡುವ ಪ್ರಾಧಿಕಾರವು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಅಡಕವಾಗಿದ್ದಗ್ಯೂ ಪರಿಗಣಿಸಲಾದ ಮತ್ತು ತೀರ್ಮಾನಿಸಲಾದ ವಿಷಯದ ಹೊರತು ಯಾವುದೇ ವಿಷಯಕ್ಕೆ ಸಂಬಂಧಿಸಿ ಆ ಉಪಪ್ರಕರಣದ ಮೇರೆಗೆ ಆದೇಶವನ್ನು ತಿದ್ದುಪಡಿ ಮಾಡಬಹುದು.

(3) (1)ನೇ ಉಪಪ್ರಕರಣದ ಮೇರೆಗೆ ಮಾಡಲಾದ ಆದೇಶವು ಯಾವುದರ ಮೇರೆಗೆ ಮೂಲ ಆದೇಶದಲ್ಲಿ ತಪ್ಪನ್ನು ಸರಿಪಡಿಸಿ ಮಾಡಲಾಗಿದೆಯೋ ಅದೇ ಕಾನೂನಿನ ಉಪಬಂಧಗಳ ಮೇರೆಗೆ ಆದೇಶವನ್ನು ಮಾಡಲಾಗಿದೆಯೆಂದು ಭಾವಿಸತಕ್ಕುದು.

xxxxx

**20. ವಾಹನ ಮತ್ತು ದೋಣಿಗಳ ಒಡೆಯರು ಮುಂತಾದವರಿಂದ ಕೆಲವು ದಾಖಲೆಗಳ ಒಪ್ಪಿಸುವಿಕೆ:–** ಅನುಸೂಚಿತ ಸರಕುಗಳ ವಾಹನ ಅಥವಾ ದೋಣಿಗಳ ಪ್ರಭಾರದಲ್ಲಿರುವ ಒಡೆಯ ಅಥವಾ ಇತರ ವ್ಯಕ್ತಿಯು ಅಂಥ ವಾಹನ ಅಥವಾ ದೋಣಿಗಳ ಸಾಗಿಸಲಾದ ಅನುಸೂಚಿತ ಸರಕುಗಳ ಬಗ್ಗೆ ಅನುಸೂಚಿತ ಸರಕುಗಳನ್ನು ಯಾವ ಸ್ಥಳೀಯ ಪ್ರದೇಶದಲ್ಲಿ ವಶಾವಣೆ ಮಾಡಲಾಗಿದೆಯೋ ಅಂಥ ಸ್ಥಳೀಯ ಪ್ರದೇಶದೊಳಗೆ ಅಧಿಕಾರ ವ್ಯಾಪ್ತಿಯಲ್ಲಿರುವ ನಿರ್ಧರಣಾ ಪ್ರಾಧಿಕಾರಿಗೆ ಅವುಗಳ ವಿವರಗಳನ್ನು ನಿಯಮಿಸಬಹುದಾದಂಥ ಕಾಲದಲ್ಲಿ ಮತ್ತು ರೀತಿಯಲ್ಲಿ ಒಪ್ಪಿಸತಕ್ಕುದು.

xxxxx

**21. ಅಪರಾಧಗಳು ಮತ್ತು ದಂಡನೆಗಳು.–** (1) ಯಾವೊಬ್ಬ ವ್ಯಕ್ತಿಯು,–

(ಎ) ಈ ಅಧಿನಿಯಮದ ಮೇರೆಗೆ ತನ್ನನ್ನು ನೋಂದಾಯಿಸಿಕೊಳ್ಳಬೇಕಾದ ವ್ಯಕ್ತಿಯು ಹಾಗೆ ತನ್ನನ್ನು ನೋಂದಾಯಿಸಿಕೊಳ್ಳದಿದ್ದರೆ; ಅಥವಾ

(ಬಿ) ಸರಕುಗಳ ವ್ಯಾಪಾರಿಯಾಗಿದ್ದು ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅದರ ಅಡಿಯಲ್ಲಿ ರಚಿತವಾದ ನಿಯಮಗಳ ಮೂಲಕ ಅಗತ್ಯಪಡಿಸಿದಂತೆ ವಿವರ ಪಟ್ಟಿಯನ್ನು ಸಲ್ಲಿಸಲು ತಪ್ಪಿದರೆ; ಅಥವಾ

(ಸಿ) 6ನೇ ಪ್ರಕರಣದ ಮೇರೆಗೆ ಹೊರಡಿಸಿದ ನೋಟೀಸನ್ನು ಪಾಲಿಸಲು ತಪ್ಪಿದರೆ; ಅಥವಾ

(ಡಿ) 7ನೇ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ವಿವರಣ ಪತ್ರವನ್ನು ಸಲ್ಲಿಸಲು ತಪ್ಪಿದರೆ; ಅಥವಾ

**17. Rectification of mistakes.-** (1) With a view to rectifying any mistake apparent from the record, the assessing authority, appellate authority or revising authority may, at any time, within five years from the date of an order passed by it, amend such order :

Provided that an amendment which has the effect of enhancing an assessment or otherwise increasing the liability of the assessee shall not be made unless the assessing authority, appellate authority or revising authority, as the case may be, has given notice to the assessee of its intention to do so and has allowed the assessee a reasonable opportunity of being heard.

(2) Where an order has been considered and decided in any proceedings by way of appeal or revision relating to an order referred to in sub-section (1), the authority passing such order may, notwithstanding anything contained in any law for the time being in force, amend the order under that sub-section in relation to any matter other than the matter which has been so considered and decided.

(3) An order passed under sub-section (1) shall be deemed to be an order passed under the same provision of law under which the original order the mistake in which was rectified, had been passed.

XXXXX

**20. Submission of certain records, by owners, etc., of vehicles and boats.-** The owner or other person in charge of a goods vehicle or boat shall in respect of the goods transported by him in such vehicle or boat submit to the assessing authority having jurisdiction over the local area in which the goods are delivered, such particulars thereof and within such time and manner as may be prescribed.

XXXXX

**21. Offences and penalties.-** (1) Any person who-

(a) being a person obliged to get himself registered under this Act does not get himself so registered; or

(b) being a dealer in goods fails to submit a return as required by the provisions of this Act or the rules made thereunder; or

(c) fails to comply with a notice issued under section 6; or

(d) fails to submit a statement as required by section 7; or

(e) fails to pay within the time allowed any tax assessed on him or any penalty levied on him under this Act; or
[1979: KAR. ACT 27 Tax on Entry of Goods 775

(f) being a sugar factory including a khandasari sugar factory fails to collect tax as required by sub-section (1) or having collected the tax fails to pay the tax so collected as required by sub-section (2) of section 9-A.

(g) fails to issue a sale bill or cash memorandum in accordance with the provisions of sub-sections (2) and (3) of section 17-A; or

(h) fails to keep true and complete accounts,

shall, on conviction by a Magistrate, be liable to a fine which shall not be less than five hundred rupees]3 but which may extend to two thousand rupees.

(2) Any person who,-

(a) wilfully submits an untrue return, or not being already an assessee under this Act, fails to submit a return as required by the provisions of this Act or the rules made thereunder, or ;

(b) wilfully submits an untrue statement under section 7 ;

(c) fraudulently evades the payments of any tax assessed on him, or other amount due from him under this Act, or

(d) wilfully acts in contravention of any of the provisions of this Act or the rules made thereunder,

shall on conviction in addition to the recovery of any tax that may be due from him, be punishable with simple imprisonment which may extend to twelve months or with fine which shall not be less than five thousand rupees but which may extend to twenty-five thousand rupees or with both and when the offence is a continuing one, with a daily fine not exceeding two hundred rupees during the period of the continuance of the offence.

XXXX

**32. Power to remove difficulties.-** If any difficulty arises in giving effect to the provisions of this Act, the State Government may, by notification make such provisions as appear to it to be necessary or expedient for removing the difficulty.

XXXXX

ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫) | ನಂ. ೧೬೯ |
|---|---|---|
| Part – IV-A | Bangalore, Wednesday, February 26, 2014 (Phalguna 7, Shaka Varsha 1935) | No. 169 |

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/33/LA Bill/2014, Bangalore, Dated: 26-2-2014**

The following Bill was introduced in Legislative Assembly on 26-2-2014

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**ಮೂರನೇ ಅಧಿವೇಶನ**

## ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ವಿಧೇಯಕ, 2014

**(2014ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 33)**

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು (2004ರ ಕರ್ನಾಟಕ ಅಧಿನಿಯಮ 32) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ಅಧಿನಿಯಮ, 2014 ಎಂದು ಕರೆಯತಕ್ಕದ್ದು.

(2) ಇದು 2014ರ ಮಾರ್ಚ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 22ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 22ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದಲ್ಲಿ **"**ಐದು**"** ಎಂಬ ಪದಕ್ಕೆ **"**ಏಳೂವರೆ**"** ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು;

(ii) (3)ನೇ ಉಪಪ್ರಕರಣದಲ್ಲಿ **"**ನಲವತ್ತು ಸಾವಿರ**"** ಎಂಬ ಪದಗಳಿಗೆ **"**ಅರವತ್ತೆರಡು ಸಾವಿರದ ಐದುನೂರು**"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(iii) (9–ಎ) ಉಪಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**3. 27ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 27ನೇ ಪ್ರಕರಣದ (1)ನೇ ಉಪಪ್ರಕರಣದ (ಸಿ) ಖಂಡದಲ್ಲಿ **"**ಐದು**"** ಎಂಬ ಪದಕ್ಕೆ **"**ಏಳೂವರೆ**"** ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**4. 31ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 31ನೇ ಪ್ರಕರಣದಲ್ಲಿ (4)ನೇ ಉಪಪ್ರಕರಣದ ತರುವಾಯ ಈ ಮುಂದಿನ ಉಪಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

**"**(5) ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು ತನ್ನ ವಹಿವಾಟುಗಳ ಸಂಬಂಧದಲ್ಲಿ, ನಿಯಮಿಸಬಹುದಾದ ಅಂಥ ನಮೂನೆಯಲ್ಲಿ, ಅಂಥ ವಿವರಗಳನ್ನು ಒಳಗೊಂಡ ಒಂದು ವಿವರಣಾಪಟ್ಟಿಯನ್ನು ನಿಯಮಿಸಬಹುದಾದ ಅಂಥ ಅವಧಿಯೊಳಗೆ ನಿಯಮಿಸಲಾದ ಪ್ರಾಧಿಕಾರಕ್ಕೆ ಪ್ರತಿಯೊಂದು ವರ್ಷದಲ್ಲಿ ಸಲ್ಲಿಸತಕ್ಕದ್ದು.**"**

**5. 63ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 63ನೇ ಪ್ರಕರಣದಲ್ಲಿ (4)ನೇ ಉಪಪ್ರಕರಣದಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

**"**ಪರಂತು, ಯಾವುದೇ ಒಂದು ವರ್ಷದಲ್ಲಿ ಒಂದಕ್ಕಿಂತ ಹೆಚ್ಚಿನ ತೆರಿಗೆಯ ಅವಧಿಗಳ ಸಂಬಂಧದಲ್ಲಿ ತೆರಿಗೆ ನಿರ್ಧಾರಣ ಅಥವಾ ತೆರಿಗೆ ಪುನರ್ ನಿರ್ಧಾರಣ ಆದೇಶಗಳ ಅಥವಾ ಯಾವುದೇ ಇತರ ಆದೇಶಗಳ ಅಥವಾ ನಡವಳಿಗಳ ವಿರುದ್ಧ ಒಂದೇ ಅಪೀಲನ್ನು ಸಲ್ಲಿಸಬಹುದು.**"**

**6. 72ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 72ನೇ ಪ್ರಕರಣದಲ್ಲಿ (1)ನೇ ಉಪಪ್ರಕರಣದಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

**"**ಪರಂತು, 22ನೇ ಪ್ರಕರಣದ ಅಡಿಯಲ್ಲಿ ನೋಂದಾಯಿತನಾಗಲು ಹೊಣೆಗಾರನಾಗಿರದ ಮತ್ತು ಅಂಥ ತೆರಿಗೆಯ ಅವಧಿಗೆ ಯಾವುದೇ ತೆರಿಗೆಯನ್ನು ಸಂದಾಯ ಮಾಡಲು ಹೊಣೆಗಾರನಾಗಿರದ ವ್ಯಾಪಾರಿಯು, ಆತನು ತನ್ನ ನೋಂದಾವಣೆಯ ಪ್ರಮಾಣ ಪತ್ರವನ್ನು ರದ್ದುಗೊಳಿಸುವುದಕ್ಕಾಗಿ

ಒಂದು ಅರ್ಜಿಯನ್ನು ಸಲ್ಲಿಸಿದ್ದರೆ, ಈ ಉಪಪ್ರಕರಣದ ಅಡಿಯಲ್ಲಿ ಯಾವುದೇ ತೆರಿಗೆಯ ಅವಧಿಗಾಗಿ ವಿವರಪಟ್ಟಿಯನ್ನು ಸಲ್ಲಿಸಲು ವಿಫಲನಾಗಿದ್ದಲ್ಲಿ ಯಾವುದೇ ದಂಡವನ್ನು ಸಂದಾಯ ಮಾಡತಕ್ಕದ್ದಲ್ಲ."

7. 74ನೇ ಪ್ರಕರಣದ ತಿದ್ದುಪಡಿ.– ಮೂಲ ಅಧಿನಿಯಮದ 74ನೇ ಪ್ರಕರಣದಲ್ಲಿ,–

(i) ಶೀರ್ಷಿಕೆಯಲ್ಲಿ "ಲೆಕ್ಕಪತ್ರಗಳ" ಎಂಬ ಪದಗಳ ತರುವಾಯ "ಹಾಗೂ ವಹಿವಾಟು ಪತ್ರಗಳ" ಎಂಬ ಪದಗಳನ್ನು ಸೇರಿಸತಕ್ಕದ್ದು;

(ii) (4)ನೇ ಉಪಪ್ರಕರಣದಲ್ಲಿ "ಪರಿಶೋಧಿತ ಲೆಕ್ಕಪತ್ರಗಳ ವಿವರಪತ್ರದ" ಎಂಬ ಪದಗಳ ತರುವಾಯ "ಅಥವಾ ಸಂದರ್ಭಾನುಸಾರವಾಗಿ ಅಧಿನಿಯಮದ 31ನೇ ಪ್ರಕರಣದ (5)ನೇ ಉಪಪ್ರಕರಣದ ಅಡಿಯಲ್ಲಿ ಅಗತ್ಯಪಡಿಸಲಾದಂತೆ ವಿವರಪತ್ರದ" ಎಂಬ ಪದಗಳನ್ನು ಹಾಗೂ "ಪರಿಶೋಧಿತ ಲೆಕ್ಕಪತ್ರಗಳ ವಿವರಪತ್ರವನ್ನು" ಎಂಬ ಪದಗಳ ತರುವಾಯ "ಅಥವಾ ಸಂದರ್ಭಾನುಸಾರವಾಗಿ ಅಧಿನಿಯಮದ 31ನೇ ಪ್ರಕರಣದ (5)ನೇ ಉಪಪ್ರಕರಣದ ಅಡಿಯಲ್ಲಿ ಅಗತ್ಯಪಡಿಸಲಾದಂತೆ ವಿವರಪತ್ರವನ್ನು" ಎಂಬ ಪದಗಳನ್ನು ಸೇರಿಸತಕ್ಕದ್ದು.

**8. ಒಂದನೇ ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಒಂದನೇ ಅನುಸೂಚಿಯಲ್ಲಿ 34ನೇ ಕ್ರಮ ಸಂಖ್ಯೆಗೆ ಸಂಬಂಧಪಟ್ಟ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು.

**9. ಮೂರನೇ ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಮೂರನೇ ಅನುಸೂಚಿಯಲ್ಲಿ 59ನೇ ಕ್ರಮ ಸಂಖ್ಯೆಯ ನಮೂದುಗಳ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"59–ಎ. ಬೀರ್, ಪೆನ್ನಿ, ಲಿಕ್ಕರ್ ಹಾಗೂ ವೈನನ್ನು ಒಳಗೊಂಡಂತೆ ಮದ್ಯ"

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಆಯವ್ಯಯ ಭಾಷಣದಲ್ಲಿ ಮಾಡಿದ ಪ್ರಸ್ತಾವಗಳನ್ನು ಅದರಲ್ಲೂ ವಿಶೇಷವಾಗಿ ನಗರ ಪ್ರದೇಶಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬಾರ್‌ಗಳು ಮತ್ತು ರೆಸ್ಟೋರೆಂಟ್‌ಗಳು ಹಾಗೂ ಕ್ಲಬ್‌ಗಳು ಲಾಡ್ಜಿಂಗ್‌ಗಳು ಮತ್ತು ಸ್ಟಾರ್ ಹೋಟೆಲ್‌ಗಳಲ್ಲಿ ಮಾರಾಟ ಮಾಡಲಾಗುವ ಬೀರ್, ಪೆನ್ನಿ, ಲಿಕ್ಕರ್ ಹಾಗೂ ವೈನನ್ನು ಒಳಗೊಂಡಂತೆ ಮದ್ಯದ ಮೇಲೆ ತೆರಿಗೆಯನ್ನು ವಿಧಿಸುವುದಕ್ಕಾಗಿ ಹಾಗೂ ಅದಕ್ಕೆ ಸಂಗತವಾದ ವಿಷಯಗಳಿಗೆ ಉಪಬಂಧವನ್ನು ಕಲ್ಪಿಸಲು ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ಕ್ಕೆ ತಿದ್ದುಪಡಿ ತರುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

**ಆದ್ದರಿಂದ ಈ ವಿಧೇಯಕ.**

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ

**ಖಂಡ 4 :** 7ನೇ ಖಂಡದ ಮೂಲಕ ಸೇರಿಸಲು ಉದ್ದೇಶಿಸಲಾದ 31ನೇ ಪ್ರಕರಣದ (5)ನೇ ಉಪಪ್ರಕರಣವು ನೋಂದಾಯಿತ ವ್ಯಾಪಾರಿಯು ತನ್ನ ವಹಿವಾಟುಗಳ ಸಂಬಂಧದಲ್ಲಿ ಸಲ್ಲಿಸಬೇಕಾದ ವಿವರಣಾಪಟ್ಟಿಯ ನಮೂನೆ ಮತ್ತು ಅದರಲ್ಲಿ ಇರಬೇಕಾದ ವಿವರಗಳು ಹಾಗೂ ಅಂಥ ವಿವರಣಾಪಟ್ಟಿಯನ್ನು ಸಲ್ಲಿಸಬೇಕಾದ ಅವಧಿಯನ್ನು ಹಾಗೂ ಸದರಿ ವಿವರಗಳನ್ನು ಯಾವ ಪ್ರಾಧಿಕಾರದ ಮುಂದೆ ಸಲ್ಲಿಸಬೇಕೋ ಆ ಪ್ರಾಧಿಕಾರದ ಸಂಬಂಧದಲ್ಲಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಸಿದ್ದರಾಮಯ್ಯ**
ಮುಖ್ಯ ಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

## ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32) ಉದ್ಧೃತ

**XX XX XX**

**22. ನೋಂದಣಿಯ ಬದ್ಧತೆ.– XX XX XX**

(2) 2005ರ ಮಾರ್ಚ್ ಮೂವತ್ತೊಂದನೇ ದಿನದಂದು ಕೊನೆಗೊಳ್ಳುವ ವರ್ಷದ ನಂತರ ಯಾವುದೇ ವರ್ಷದಲ್ಲಿ, ಯಾವುದೇ ಸಮಯದಲ್ಲಿ, ತೆರಿಗೆಗೆ ಗುರಿಯಾಗತಕ್ಕ ತನ್ನ ವಹಿವಾಟು ಐದು ಲಕ್ಷ ರೂಪಾಯಿಗಳನ್ನು ಮೀರಬಹುದು ಎಂದು ಸಕಾರಣವಾಗಿ ನಂಬಿರುವ ಪ್ರತಿಯೊಬ್ಬ ವ್ಯಾಪಾರಿಯು

ನೋಂದಾಯಿತನಾಗಲು ಬದ್ಧನಾಗಿರತಕ್ಕದ್ದು ಮತ್ತು ಅಂಥ ಬದ್ಧತೆಯನ್ನು ತಕ್ಷಣ ಅಥವಾ ಸರ್ಕಾರವು ಅಧಿಸೂಚಿಸಬಹುದಾದ ಅಂಥ ದಿನಾಂಕದಂದು ವರದಿ ಮಾಡತಕ್ಕದ್ದು.

(3) 3ನೇ ಪ್ರಕರಣದ ಅನುಸಾರವಾಗಿ ತೆರಿಗೆಯನ್ನು ವಿಧಿಸತಕ್ಕ ದಿನಾಂಕದ ತರುವಾಯದ ಯಾವುದೇ ಒಂದು ತಿಂಗಳಿನಲ್ಲಿ ತೆರಿಗೆಗೆ ಗುರಿಯಾಗತಕ್ಕ ವಹಿವಾಟು ನಲವತ್ತು ಸಾವಿರ ರೂಪಾಯಿಗಳನ್ನು ಮೀರುವ ಪ್ರತಿಯೊಬ್ಬ ವ್ಯಾಪಾರಿಯು ಥಥಥ ತಕ್ಷಣ ನೋಂದಾಯಿತನಾಗತಕ್ಕದ್ದು.

**XX XX XX**

(9-ಎ) ಕಾಮಗಾರಿಗಳ ಕರಾರಿನ ನಿರ್ವಹಣೆಯಲ್ಲಿ ನಿರತನಾದ ಪ್ರತಿಯೊಬ್ಬ ವ್ಯಾಪಾರಿಯು, ನೋಂದಾಯಿತನಾಗಲು ಬದ್ಧನಾಗಿರತಕ್ಕದ್ದು ಮತ್ತು ಯಾವ ತಿಂಗಳಲ್ಲಿ ಕಾಮಗಾರಿಗಳ ಕರಾರಿನ ನಿರ್ವಹಣೆಯನ್ನು ಕೈಗೊಳ್ಳಲಾಯಿತೋ ಆ ತಿಂಗಳಿನ ಮುಕ್ತಾಯದ ತರುವಾಯ ಅಂಥ ಬದ್ಧತೆಯನ್ನು ವರದಿ ಮಾಡತಕ್ಕದ್ದು.

**XX XX XX**

**27. ನೋಂದಣಿಯ ರದ್ದಿಯಾತಿ.-** (1) ಈ ಮುಂದಿನ ಯಾವುದೇ ಸಂದರ್ಭದಲ್ಲಿ ಎಂದರೆ,-

(ಎ) ಒಬ್ಬ ನೋಂದಾಯಿತ ವ್ಯಾಪಾರಿಯು ಯಾವುದೇ ವ್ಯಾಪಾರವನ್ನು ಮುಂದುವರೆಸದಿದ್ದಲ್ಲಿ, ಪೂರ್ಣವಾಗಿ ವರ್ಗಾಯಿಸಿದ್ದಲ್ಲಿ ಅಥವಾ ಅನ್ಯಥಾ ವಿಲೆ ಮಾಡಿದ್ದಲ್ಲಿ; ಅಥವಾ (ಬಿ) ವ್ಯಾಪಾರದ ಮಾಲೀಕತ್ವದ ಸ್ಥಾನಮಾನದಲ್ಲಿ ಯಾವುದೇ ಬದಲಾವಣೆಯಾಗಿದ್ದಲ್ಲಿ; ಅಥವಾ (ಸಿ) ನೋಂದಾಯಿತ ವ್ಯಾಪಾರಿಯ ಸರಕುಗಳ ಮಾರಾಟದ ತೆರಿಗೆಗೆ ಗುರಿಯಾಗತಕ್ಕ ವಹಿವಾಟು ಹನ್ನೆರಡು ನಿರಂತರ ತಿಂಗಳುಗಳ ಯಾವುದೇ ಅವಧಿಯಲ್ಲಿ ಐದು ಲಕ್ಷ ರೂಪಾಯಿಗಳನ್ನು ಮೀರದಿದ್ದಲ್ಲಿ; ಅಥವಾ

**XX XX XX**

**31. ಲೆಕ್ಕ ಪತ್ರಗಳು.- (1) XX XX XX**

(4) ಯಾರ ಒಟ್ಟು ವಹಿವಾಟು ಒಂದು ವರ್ಷದಲ್ಲಿ ಒಂದು ನೂರು ಲಕ್ಷ ರೂಪಾಯಿಗಳನ್ನು ಮೀರುವುದೋ, ಆ ಪ್ರತಿಯೊಬ್ಬ ವ್ಯಾಪಾರಿಯು, ತನ್ನ ಲೆಕ್ಕಪತ್ರಗಳನ್ನು ನಿಯಮಿಸಬಹುದಾದಂಥ ಷರತ್ತುಗಳಿಗೆ ಮತ್ತು ಅಂಥ ಮಿತಿಗಳಿಗೆ ಒಳಪಟ್ಟು ಒಬ್ಬ ಚಾರ್ಟರ್ಡ್ ಅಕೌಂಟೆಂಟ್ ಅಥವಾ ಕಾಸ್ಟ್ ಅಕೌಂಟೆಂಟ್ ಅಥವಾ ಒಬ್ಬ ತೆರಿಗೆ ವೃತ್ತಿದಾರನಿಂದ ಪರಿಶೋಧಿಸತಕ್ಕದ್ದು ಮತ್ತು ಪರಿಶೋಧಿತ ಲೆಕ್ಕಪತ್ರಗಳ ವಿವರಣ ಪಟ್ಟಿಯ ಒಂದು ಪ್ರತಿಯನ್ನು ಮತ್ತು ನಿಯಮಿಸಲಾದ ದಸ್ತಾವೇಜುಗಳನ್ನು, ನಿಯಮಿಸಲಾದ ರೀತಿಯಲ್ಲಿ ನಿಯಮಿಸಲಾದ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

**XX XX XX**

**63. ಅಪೀಲು ನ್ಯಾಯಾಧಿಕರಣಕ್ಕೆ ಅಪೀಲು.- (1) XX XX XX**

(4) ಅಪೀಲು ಅಥವಾ ಎದುರು ಆಕ್ಷೇಪಣೆಗಳ ವಿವರಣ ಪತ್ರವು ನಿಯಮಿಸಲಾದ ನಮೂನೆಯಲ್ಲಿ ಇರತಕ್ಕದ್ದು, ನಿಯಮಿಸಲಾದ ರೀತಿಯಲ್ಲಿ ಸತ್ಯಾಪನೆ ಮಾಡಿರತಕ್ಕದ್ದು ಮತ್ತು (1)ನೇ ಉಪಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರದಿಂದ ಅಥವಾ ಆಯುಕ್ತರಿಂದ ಪ್ರಾಧಿಕೃತನಾದ ಅಧಿಕಾರಿಯ ಹೊರತಾಗಿ ಯಾವೊಬ್ಬ ವ್ಯಕ್ತಿಯು, ಅಪೀಲು ಸಲ್ಲಿಸಿದ ಸಂದರ್ಭದಲ್ಲಿ, ತೆರಿಗೆಯ ಅಥವಾ ವಿವಾದಿತ ಇತರೆ ಮೊಬಲಗಿನ ಅರ್ಧದಷ್ಟನ್ನು ಸಂದಾಯ ಮಾಡಿದ ಬಗ್ಗೆ ರುಜುವಾತಿನೊಡನೆ ಮತ್ತು ಆಕ್ಷೇಪಿಸಲಾದ ತೆರಿಗೆ ನಿರ್ಧರಣಾ ಮೊಬಲಗಿನ ಶೇಕಡಾ ಎರಡರಷ್ಟಕ್ಕೆ ಸಮನಾದ ಶುಲ್ಕದೊಂದಿಗೆ ಇರತಕ್ಕದ್ದು. ಪರಂತು, ಸಂದಾಯ ಮಾಡಬೇಕಾದ ಮೊಬಲಗು ಯಾವ ಸಂದರ್ಭದಲ್ಲಿಯೂ ಎರಡುನೂರು ರೂಪಾಯಿಗಳಿಗಿಂತ ಕಡಿಮೆ ಇರತಕ್ಕದ್ದಲ್ಲ ಅಥವಾ ಒಂದು ಸಾವಿರ ರೂಪಾಯಿಗಳಿಗಿಂತ ಹೆಚ್ಚಿಗೆ ಇರತಕ್ಕದ್ದಲ್ಲ.

**XX XX XX**

**72. ವಿವರ ಪಟ್ಟಿಗಳಿಗೆ ಮತ್ತು ತೆರಿಗೆ ನಿರ್ಧರಣಕ್ಕೆ ಸಂಬಂಧಿಸಿದ ದಂಡಗಳು.-** (1) ಅಧಿನಿಯಮದ ಅಡಿಯಲ್ಲಿ ಅಗತ್ಯಪಡಿಸಿದಂತೆ ಒಂದು ವಿವರಪಟ್ಟಿ ಸಲ್ಲಿಸಲು ತಪ್ಪಿದ ಅಥವಾ ಸಲ್ಲಿಸಿದ ಯಾವುದೇ ವಿವರ ಪಟ್ಟಿಯಂತೆ ಬಾಕಿ ಇರುವ ತೆರಿಗೆಯನ್ನು ಸಂದಾಯಮಾಡಲು ವಿಫಲನಾದ ಒಬ್ಬ ವ್ಯಾಪಾರಿಯು ಬಾಕಿ ಇರುವ ಯಾವುದೇ ತೆರಿಗೆ ಅಥವಾ ಬಡ್ಡಿಯ ಜೊತೆಗೆ,-

(ಎ) ಸಂದಾಯಮಾಡಲು ತಪ್ಪಿದ ಪ್ರತಿಯೊಂದು ದಿನಕ್ಕಾಗಿ ಐವತ್ತು ರೂಪಾಯಿಗಳ ದಂಡವನ್ನು ಮತ್ತು ಹಾಗೆ ಸಂದಾಯಮಾಡಲು ತಪ್ಪಿರುವುದು ಐದು ದಿನಗಳಿಗಿಂತ ಹೆಚ್ಚಾಗಿರುವಲ್ಲಿ,

(i) ತೆರಿಗೆ ಬಾಕಿಯು ಇನ್ನೂರೈವತ್ತು ರೂಪಾಯಿಗಳಿಗಿಂತ ಕಡಿಮೆ ಇದ್ದರೆ, ಅಂಥ ದಂಡವು ಇನ್ನೂರೈವತ್ತು ರೂಪಾಯಿಗಳನ್ನು ಮೀರತಕ್ಕದ್ದಲ್ಲ;

(ii) ತೆರಿಗೆ ಬಾಕಿಯು ಇನ್ನೂರೈವತ್ತು ರೂಪಾಯಿಗಳಿಗಿಂತ ಹೆಚ್ಚಾಗಿದ್ದರೆ, ಅಂಥ ದಂಡವನ್ನು ಪ್ರತಿ ದಿನಕ್ಕೆ ಐವತ್ತು ರೂಪಾಯಿಗಳಂತೆ, ಬಾಕಿ ಇರುವ ತೆರಿಗೆಯ ಮೊಬಲಗನ್ನು ಮೀರದಂತೆ ಲೆಕ್ಕಹಾಕತಕ್ಕದ್ದು; ಮತ್ತು

(ಬಿ) (i) ಸಂದಾಯಮಾಡಲು ತಪ್ಪಿರುವುದು, ಹತ್ತು ದಿನಗಳಿಗಿಂತ ಹೆಚ್ಚಾಗಿಲ್ಲದಿದ್ದರೆ ಬಾಕಿ ಇರುವ ತೆರಿಗೆ ಮೊಬಲಗಿನ ಶೇಕಡಾ ಐದರಷ್ಟು ಅಥವಾ ಐವತ್ತು ರೂಪಾಯಿಗಳು ಇವುಗಳಲ್ಲಿ ಯಾವುದು ಹೆಚ್ಚೋ ಅಷ್ಟಕ್ಕೆ ಸಮನಾದ ಹೆಚ್ಚಿನ ದಂಡವನ್ನು;

(ii) ಸಂದಾಯ ಮಾಡಲು ತಪ್ಪಿರುವುದು ಹತ್ತು ದಿನಗಳಿಗಿಂತ ಹೆಚ್ಚಾಗಿದ್ದರೆ, ಬಾಕಿ ಇರುವ ತೆರಿಗೆಯ ಶೇಕಡಾ ಹತ್ತಕ್ಕೆ, ಸಮನಾದ ಹೆಚ್ಚಿನ ದಂಡವನ್ನು – ಸಂದಾಯಮಾಡಲು ಹೊಣೆಗಾರನಾಗತಕ್ಕದ್ದು.

**XX XX XX**

**74. ದಾಖಲೆಗಳನ್ನು ಇಡುವುದಕ್ಕೆ ಮತ್ತು ಪರಿಶೋಧಿತ ಲೆಕ್ಕ ಪತ್ರಗಳ ವಿವರ ಪತ್ರವನ್ನು ಸಲ್ಲಿಸುವುದಕ್ಕೆ ಸಂಬಂಧಿಸಿದ ದಂಡಗಳು.- (1)**

**XX XX XX**

(4) ಪರಿಶೋಧಿತ ಲೆಕ್ಕಪತ್ರಗಳ ವಿವರ ಪತ್ರದ ಒಂದು ಪ್ರತಿಯನ್ನು ನಿಯಮಿಸಿದ ಕಾಲದೊಳಗಾಗಿ ಸಲ್ಲಿಸಲು ವಿಫಲನಾದ ಯಾವೊಬ್ಬ ವ್ಯಾಪಾರಿಗೆ ನಿಯಮಿಸಲಾದ ಪ್ರಾಧಿಕಾರವು ಹಾಗೆ ದಂಡ ವಿಧಿಸುವುದರ ವಿರುದ್ಧ ಲಿಖಿತದಲ್ಲಿ ಕಾರಣ ತೋರಿಸಲು ಒಂದು ಅವಕಾಶವನ್ನು ನೀಡಿದ ತರುವಾಯ, ಐದು ಸಾವಿರ ರೂಪಾಯಿಗಳ ದಂಡವನ್ನು ಮತ್ತು ಪರಿಶೋಧಿತ ಲೆಕ್ಕ ಪತ್ರಗಳ ವಿವರ ಪತ್ರವನ್ನು ಸಲ್ಲಿಸುವ ವಿಫಲತೆಯು ಮುಂದುವರೆಯುತ್ತಿರುವವರೆಗೆ ಪ್ರತಿದಿನಕ್ಕೆ ಐವತ್ತು ರೂಪಾಯಿಗಳ ಹೆಚ್ಚಿನ ದಂಡವನ್ನು ಸಂದಾಯಮಾಡುವುದಕ್ಕೆ ಗುರಿಯಾತಗತಕ್ಕದ್ದು.

**ಒಂದನೇ ಅನುಸೂಚಿ**

**(5ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ತೆರಿಗೆಯಿಂದ ವಿನಾಯಿತಿಗೊಳಿಸಿದ ಸರಕುಗಳು)**

| ಕ್ರಮ ಸಂಖ್ಯೆ | ಸರಕುಗಳ ವಿವರ |
|---|---|
| 1 | 2 |
| 1. | ಕೈಯಿಂದ ನಡೆಸುವ ಅಥವಾ ಪ್ರಾಣಿಗಳಿಂದ ಎಳೆಸುವ ಕೃಷಿ ಉಪಕರಣಗಳು |

**XX XX XX**

34. ಬೀರ್, ಫೆನ್ನಿ, ಲಿಕ್ಕೇರ್ ಹಾಗೂ ವೈನನ್ನು ಒಳಗೊಂಡಂತೆ ಮದ್ಯ

**ಮೂರನೇ ಅನುಸೂಚಿ**

**XXX**

**[4(1)(ಎ)(ii)ನೇ ಪ್ರಕರಣ]**

| ಕ್ರಮ ಸಂಖ್ಯೆ | ಸರಕುಗಳ ವಿವರ |
|---|---|
| 1 | 2 |

1. ಕೈಯಿಂದ ನಡೆಸದಿರುವ ಅಥವಾ ಪ್ರಾಣಿಗಳಿಂದ ಎಳೆಸದಿರುವ ಕೃಷಿ ಉಪಕರಣಗಳು

59. ಸುಣ್ಣ, ಸುಣ್ಣದ ಕಲ್ಲು, ಸುಣ್ಣದ ಉತ್ಪನ್ನಗಳು, ಡಾಲೊಮೈಟ್ ಮತ್ತು ಇತರ ಸ್ವಚ್ಛಗೊಳಿಸುವ ವಸ್ತುಗಳು.

## KARNATAKA LEGISLATIVE ASSEMBLY
## FOURTEENTH LEGISLATIVE ASSEMBLY
## THIRD SESSION

## THE KARNATAKA VALUE ADDED TAX (AMENDMENT) BILL, 2014

**(L.A. Bill No. 33 of 2014)**

A Bill further to amend the Karnataka Value Added Tax Act, 2003.

Whereas it is expedient further to amend the Karnataka Value Added Tax Act, 2003 (Karnataka Act 32 of 2004) for the purposes hereinafter appearing;

Be it enacted by the Karnataka State Legislature in the Sixty fifth year of the Republic of India, as follows.-

**1. Short title and commencement.-** (1) This Act may be called the Karnataka Value Added Tax (Amendment) Act, 2014.

(2) It shall come into force with effect from the First day of March, 2014.

**2. Amendment of section 22.-** In the Karnataka Value Added Tax Act, 2003 (Karnataka Act 32 of 2004) (hereinafter referred to as the principal Act), in section 22,

(i) in sub-section (2), for the words "five", the words "seven and one half" shall be substituted;

(ii) in sub-section (3), for the words "forty thousand", the words "sixty two thousand five hundred" shall be substituted; and

(iii) sub-section (9-A) shall be omitted.

**3. Amendment of section 27.-** In section 27 of the principal Act, in sub-section (1), in clause (c), for the words "five", the words "seven and one half" shall be substituted.

**4. Amendment of section 31.-** In section 31 of the principal Act, after sub-section (4), the following sub-section shall be inserted namely.-

"(5) Every registered dealer shall furnish every year to the prescribed authority, a statement relating to his turnovers in such form, containing such particulars and within such period as may be prescribed."

**5. Amendment of section 63.**- In section 63 of the principal Act, in sub-section (4), the following proviso shall be inserted, namely.-

"Provided that a single appeal may be preferred against orders of assessment or reassessment or any other orders or proceedings, in respect of more than one tax periods of any year."

**6. Amendment of section 72.-** In section 72 of the principal Act, in sub-section (1), the following proviso shall be inserted, namely.-

"Provided that no penalty shall be payable for failure to furnish a return for any tax period in a year under this sub-section by a dealer who not being liable to get registered under section 22 and is also not liable to pay any tax for such tax period, if he makes an application for cancellation of his certificate of registration."

**7. Amendment of section 74.-** In section 74 of the principal Act,

(i) in the heading, after the words "statement of accounts", the words "and turnovers" shall be inserted.

(ii) in sub-section (4), after the words "audited statement of accounts", in the two places they occur, the words "or statement as required under sub-section (5) of Section 31of the Act, as the case may be" shall be inserted.

**8. Amendment of First Schedule.**- In the First Schedule to the principal Act, the entries relating to serial number 34 shall be omitted.

**9. Amendment of Third Schedule**.- In the Third Schedule to the principal Act, after the entries relating to serial number 59, the following shall be inserted, namely.-

"59-A. Liquor including beer, fenny, liqueur and wine"

## STATEMENT OF OBJECTS AND REASONS

It is considered necessary to amend the Karnataka Value Added Tax Act, 2003 to give effect to the proposals made in the Budget particularly to provide for levy of tax on sale of liquor including beer, fenny, liqueur and wine by bar and restaurants operating in urban areas and by clubs, lodging houses and star hotels, and matters connected therewith.

Hence, the Bill.

## FINANCIAL MEMORANDUM

There is no extra expenditure involved by the proposed measure.

## MEMORANDUM REGARDING DELEGATED LEGISLATION

**CLAUSE 4 -** Sub-section (5) of section 31 sought to be inserted under clause 7 empowers the State Government to make rules regarding the form and particulars to be furnished in the statement and the period within which such statement has to be furnished by a registered dealer and the Authority before home the said particulars has to be furnished.

The proposed delegation of Legislative power is normal in character.

**SIDDARAMAIAH**

CHIEF MINISTER

**P. OMPRAKASHA**
Secretary
Karnataka Legislative Assembly

## ANNEXURE

## EXTRACT FROM THE KARNATAKA VALUE ADDED TAX ACT, 2003 (KARNATAKA ACT 32 OF 2004)

**XX** **XX** **XX**

**22. Liability to register.**- (1) **XX** **XX** **XX**

(2) Every dealer who at any time has reason to believe that his taxable turnover is likely to exceed five lakh rupees during any year after the year ending Thirty First day of March, 2005 shall be liable to be registered and report such liability forthwith or on such date as may be notified by the Government.

(3) Every dealer whose taxable turnover exceeds forty thousand rupees] in any one month after the date from which the tax shall be levied, in accordance with Section 3, shall register forthwith.

**XX XX XX**

(9-A) Every dealer engaged in the execution of works contract shall be liable to register and shall report such liability after the end of the month in which execution of any works contract is undertaken.

**XX XX XX**

**27. Cancellation of registration.**- (1) In any case where.-

(a) any business of a registered dealer has been discontinued, transferred fully or otherwise disposed of; or
(b) there is any change in the status of the ownership of the business; or
(c) the taxable turnover of sale of goods of a registered dealer has, during any period of twelve consecutive months, not exceeded five lakh rupees; or
(d) a dealer issues tax invoices without effecting any taxable sales; or
(e) a dealer being an individual, registered under this Act dies,

and for any other good and sufficient reason, the prescribed authority may, either on its own motion or on the application of the dealer, or in the case of death, on the application of the legal heirs, made in the prescribed manner, cancel the registration certificate from such date, including any anterior date, as it considers fit having regard to the circumstances of the case:

Provided that in the case of a deceased individual, on application by his legal heirs for transfer of registration and subject to such conditions as may be prescribed, the prescribed authority may instead of cancellation permit transfer of his certificate of registration to the legal heirs.

**31. Accounts.**- **XX XX XX**

(4) Every dealer whose total turnover in a year exceeds one hundred lakh rupees shall have his accounts audited by a Chartered Accountant or a Cost Accountant or a Tax Practitioner subject to such conditions and such limits as may be prescribed and shall submit to the prescribed authority a copy of the audited statement of accounts and prescribed documents in the prescribed manner. **(Refer Rules 33 and 34)**:

Provided that every dealer whose total turnover for the year ending Thirty First day of March, 2010 exceeds forty lakh rupees shall have his accounts audited.

**XX XX XX**

**63. Appeal to the Appellate Tribunal.**- (1) Any officer empowered by the State Government or the Commissioner in this behalf or any other person objecting to an order passed by the appellate authority under Section 62 or the Joint Commissioner under Section 63-A may appeal to the Appellate Tribunal within a period of sixty days from the date on which the order was communicated to him.

**XX XX XX**

(4) The appeal, or the memorandum of cross-objections, shall be in the prescribed form, shall be verified in the prescribed manner, and, in the case of an appeal preferred by any person other than an officer empowered by the State Government or the Commissioner under sub-section (1) shall be accompanied by proof of payment of thirty percent of the tax or other amount disputed and also a fee equal to two percent of the amount of assessment objected to, provided that the sum payable in no case be less than two hundred rupees or more than one thousand rupees.

**XX XX XX**

**72. Penalties relating to returns and assessment.**- (1) A dealer who fails to furnish a return or who fails to pay the tax due on any return furnished as required under the Act shall be liable to pay together with any tax or interest due.-

(a) a penalty of fifty rupees for each day of default and where such default is more than five days, such penalty.-
   (i) shall not exceed two hundred and fifty rupees if the tax due is less than the said amount;
   (ii) shall be calculated at fifty rupees per day not exceeding the amount of tax due, if the tax due is more than two hundred and fifty rupees; and
(b) a further penalty equal to.-
   (i) five percent of the amount of tax due or fifty rupees whichever is higher, if the default is not for more than ten days, and
   (ii) ten percent of the tax due, if the default is for more than ten days;

**XX XX XX**

**74. Penalties relating to the keeping of records and submission of audited statement of accounts.**- (1) Any dealer who fails to keep and maintain proper records, in accordance with Section 31 or by order of the prescribed authority shall be liable to a penalty not exceeding five thousand rupees if such failure is the first during any year or ten thousand rupees if such failure is the second or subsequent during that year and, in addition, a further penalty not

exceeding two hundred rupees per day for so long as the failure continues after being given an opportunity to show cause against such imposition of penalty.

**XX XX XX**

(4) Any dealer who fails to submit within the time prescribed a copy of the audited statement of accounts shall be liable to pay a penalty of five thousand rupees and, a further penalty of fifty rupees per day for so long as the failure to submit a copy of the audited statement of accounts continues, after being given an opportunity of showing cause in writing against such imposition of penalty by the prescribed authority.

**XX XX XX**

**FIRST SCHEDULE**

**(Goods exempted from tax under sub-section (1) of section 5)**

| Serial Number | Description of Goods |
|---|---|
| (1) | (2) |
| **XX XX XX** | |
| 34. | Liquor including Beer, Fenny, Liqueur and Wine. |

**XX XX XX**

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫) | ನಂ. ೧೭೦ |
|---|---|---|
| **Part – IV-A** | **Bangalore, Wednesday, February 26, 2014 (Phalguna 7, Shaka Varsha 1935)** | **No. 170** |

## KARNATAKA LEGISLATIVE ASSEMBLY SECRETARIAT

## NOTIFICATION

**No. KLA/LGA/34/LA Bill/2014, Bangalore, Dated: 26-2-2014**

The following Bill was introduced in Legislative Assembly on 26-2-2014

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**ಮೂರನೇ ಅಧಿವೇಶನ**

## ಕರ್ನಾಟಕ ಧನವಿನಿಯೋಗ ವಿಧೇಯಕ, 2014

**(2014ರ ವಿಧಾನಸಭೆಯ ವಿಧೇಯಕ ಸಂಖ್ಯೆ–34)**

**2013–14**ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಅಧಿಕ ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

**2013–14**ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಅಧಿಕ ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ :

ಇದು ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗಲಿ.

**1. ಸಂಕ್ಷಿಪ್ತ ಹೆಸರು :** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ ಅಧಿನಿಯಮ, 2014 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ 2013–14**ನೇ ಹಣಕಾಸು ವರ್ಷಕ್ಕಾಗಿ **445484.74** ಲಕ್ಷ ರೂಪಾಯಿಗಳ ನೀಡಿಕೆ: ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಸೇವೆಗಳ ಸಂಬಂಧದಲ್ಲಿ **2013–14ನೇ** ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ **ನಾಲ್ಕು ಸಾವಿರದ ನಾಲ್ಕುನೂರ ಐವತ್ನಾಲ್ಕು ಕೋಟಿ**

**ಎಂಬತ್ನಾಲ್ಕು ಲಕ್ಷ ಮತ್ತು ಎಪ್ಪತ್ನಾಲ್ಕು ಸಾವಿರ ರೂಪಾಯಿಗಳು** ಮೀರದಷ್ಟು ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು ಮತ್ತು ಉಪಯೋಗಿಸತಕ್ಕದ್ದು.

**3. ಧನವಿನಿಯೋಗ:** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**

**(2 ಮತ್ತು 3ನೇ ಪ್ರಕರಣಗಳನ್ನು ನೋಡಿ)**

(₹. ಲಕ್ಷಗಳಲ್ಲಿ)

| | | | ಮೀರದ ಮೊಬಲಗು | | |
|---|---|---|---|---|---|
| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | ಒಟ್ಟು |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 43,368.16 | ... | 43,368.16 |
| | | ಬಂಡವಾಳ | 1,554.01 | ... | 1,554.01 |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 3,876.54 | ... | 3,876.54 |
| | | ಬಂಡವಾಳ | 1,370.65 | ... | 1,370.65 |
| 03 | ಆರ್ಥಿಕ | ರಾಜಸ್ವ | 1,00,876.82 | ... | 1,00,876.82 |
| | | ಬಂಡವಾಳ | 204.49 | ... | 204.49 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ರಾಜಸ್ವ | 5,527.91 | 576.75 | 6,104.66 |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 25,911.72 | ... | 25,911.72 |
| | | ಬಂಡವಾಳ | 2,075.00 | ... | 2,075.00 |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ | ರಾಜಸ್ವ | 24.21 | ... | 24.21 |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 20,256.08 | ... | 20,256.08 |
| | | ಬಂಡವಾಳ | 31,538.00 | ... | 31,538.00 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 634.87 | ... | 634.87 |
| 09 | ಸಹಕಾರ | ರಾಜಸ್ವ | 54,700.02 | ... | 54,700.02 |
| | | ಬಂಡವಾಳ | 1,141.26 | ... | 1,141.26 |
| 10 | ಸಮಾಜ ಕಲ್ಯಾಣ | ರಾಜಸ್ವ | 4,501.01 | ... | 4,501.01 |
| | | ಬಂಡವಾಳ | 2,417.00 | ... | 2,417.00 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 902.37 | ... | 902.37 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 254.63 | ... | 254.63 |
| 13 | ಆಹಾರ ಮತ್ತು ನಾಗರಿಕ ಸರಬರಾಜು | ರಾಜಸ್ವ | 509.20 | ... | 509.20 |
| 14 | ಕಂದಾಯ | ರಾಜಸ್ವ | 30,854.71 | ... | 30,854.71 |

**ಅನುಸೂಚಿ**

**(2 ಮತ್ತು 3ನೇ ಪ್ರಕರಣಗಳನ್ನು ನೋಡಿ)**

(₹. ಲಕ್ಷಗಳಲ್ಲಿ)

| | | | ಮೀರದ ಮೊಬಲಗು | | |
|---|---|---|---|---|---|
| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | ಒಟ್ಟು |
| **1** | **2** | | **3** | **4** | **5** |
| 16 | ವಸತಿ | ರಾಜಸ್ವ | 3,174.84 | ... | 3,174.84 |
| 17 | ಶಿಕ್ಷಣ | ರಾಜಸ್ವ | 8,705.37 | ... | 8,705.37 |
| | | ಬಂಡವಾಳ | 2,110.47 | ... | 2,110.47 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 2,966.45 | ... | 2,966.45 |
| | | ಬಂಡವಾಳ | 10,617.50 | ... | 10,617.50 |
| 19 | ನಗರಾಭಿವೃದ್ಧಿ | ರಾಜಸ್ವ | 19,288.20 | ... | 19,288.20 |
| 20 | ಲೋಕೋಪಯೋಗಿ | ರಾಜಸ್ವ | 1,013.30 | ... | 1,013.30 |
| | | ಬಂಡವಾಳ | 50,000.00 | ... | 50,000.00 |
| 21 | ಜಲಸಂಪನ್ಮೂಲ | ರಾಜಸ್ವ | 2.00 | ... | 2.00 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ | ರಾಜಸ್ವ | 10,047.68 | ... | 10,047.68 |
| | | ಬಂಡವಾಳ | 1,463.83 | ... | 1,463.83 |
| 23 | ಕಾರ್ಮಿಕ | ರಾಜಸ್ವ | 1,858.68 | ... | 1,858.68 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 80.00 | ... | 80.00 |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 139.67 | ... | 139.67 |
| | | ಬಂಡವಾಳ | 1.00 | ... | 1.00 |
| 27 | ಕಾನೂನು | ರಾಜಸ್ವ | 833.93 | ... | 833.93 |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ | 70.00 | 25.00 | 95.00 |
| 29 | ಋಣ ಮೇಲುಸ್ತುವಾರಿ | ರಾಜಸ್ವ | ... | 0.01 | 0.01 |
| | | ಬಂಡವಾಳ | 11.40 | ... | 11.40 |
| | **ಮೊತ್ತ** | **ರಾಜಸ್ವ** | **3,40,378.37** | **601.76** | **3,40,980.13** |
| | | **ಬಂಡವಾಳ** | **1,04,504.61** | ... | **1,04,504.61** |
| | **ಒಟ್ಟು ಮೊತ್ತ** | | **4,44,882.98** | **601.76** | **4,45,484.74** |

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2013–14ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ವಿನಿಯೋಗಿಸಲು ಭಾರತ ಸಂವಿಧಾನದ 205ನೇ (1) (ಎ) ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಸಿದ್ದರಾಮಯ್ಯ**
ಮುಖ್ಯಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**THIRD SESSION**

## THE KARNATAKA APPROPRIATION BILL, 2014

## (L.A. Bill No. 34 of 2014)

A Bill to authorize payment and appropriation of certain further sums from and out of the Consolidated Fund of the State of Karnataka for the Services of the Financial year **2013-14.**

Whereas it is expedient to authorize payment and appropriation of certain further sums from and out of the Consolidated fund of the State for the services of the Financial year **2013-14.**

Be it enacted by the Karnataka State Legislature in the Sixty Fifth Year of the Republic of India as follows :-

**1. Short Title :** This Act may be called the Karnataka Appropriation Act, **2014.**

**2. Issue of Rupees 445484.74** Lakhs out of the Consolidated Fund of the State of Karnataka for the Financial year **2013-14 :** From and out of the Consolidated Fund of the State of Karnataka, there may be paid and applied sums not exceeding those specified in column 5 of the Schedule amounting in the aggregate to the sum of **Four thousand four hundred and fifty four crores eighty four lakhs and Seventy four thousand Rupees** towards defraying the several charges which will come in the course of payment during the Financial Year 2013-14 in respect of the services specified in column 2 of the schedule.

**3. Appropriation :-** The sums authorized to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

## SCHEDULE

**(See Sections 2 and 3)**

**(₹ in lakhs)**

| | | | Sums not exceeding | | |
|---|---|---|---|---|---|
| Demand No. | Service & Purpose | | voted by the Legislative Assembly | Charged on the consolidated Fund | Total |
| 1 | 2 | | 3 | 4 | 5 |
| 01 | Agriculture and Horticulture | Revenue | 43,368.16 | ... | 43,368.16 |
| | | Capital | 1,554.01 | ... | 1,554.01 |
| 02 | Animal Husbandry and Fisheries | Revenue | 3,876.54 | ... | 3,876.54 |
| | | Capital | 1,370.65 | ... | 1,370.65 |
| 03 | Finance | Revenue | 1,00,876.82 | ... | 1,00,876.82 |
| | | Capital | 204.49 | ... | 204.49 |
| 04 | Department of Personnel and Administrative Reforms | Revenue | 5,527.91 | 576.75 | 6,104.66 |
| 05 | Home and Transport | Revenue | 25,911.72 | ... | 25,911.72 |
| | | Capital | 2,075.00 | ... | 2,075.00 |
| 06 | Infrastructure Development | Revenue | 24.21 | ... | 24.21 |
| 07 | Rural Development and Panchayath Raj | Revenue | 20,256.08 | ... | 20,256.08 |
| | | Capital | 31,538.00 | ... | 31,538.00 |
| 08 | Forest, Ecology and Environment | Revenue | 634.87 | ... | 634.87 |
| 09 | Co-operation | Revenue | 54,700.02 | ... | 54,700.02 |
| | | Capital | 1,141.26 | ... | 1,141.26 |
| 10 | Social Welfare | Revenue | 4,501.01 | ... | 4,501.01 |
| | | Capital | 2,417.00 | ... | 2,417.00 |
| 11 | Women and Child Development | Revenue | 902.37 | ... | 902.37 |
| 12 | Information, Tourism and Youth Services | Revenue | 254.63 | ... | 254.63 |
| 13 | Food and Civil Supplies | Revenue | 509.20 | ... | 509.20 |
| 14 | Revenue | Revenue | 30,854.71 | ... | 30,854.71 |

**SCHEDULE**

**(See Sections 2 and 3**

**(₹ in lakhs)**

| | | | Sums not exceeding | | |
|---|---|---|---|---|---|
| **Demand No.** | **Service & Purpose** | | **voted by the Legislative Assembly** | **Charged on the consolidated Fund** | **Total** |
| **1** | **2** | | **3** | **4** | **5** |
| 16 | Housing | Revenue | 3,174.84 | ... | 3,174.84 |
| 17 | Education | Revenue | 8,705.37 | ... | 8,705.37 |
| | | Capital | 2,110.47 | ... | 2,110.47 |
| 18 | Commerce and Industries | Revenue | 2,966.45 | ... | 2,966.45 |
| | | Capital | 10,617.50 | ... | 10,617.50 |
| 19 | Urban Development | Revenue | 19,288.20 | ... | 19,288.20 |
| 20 | Public Works | Revenue | 1,013.30 | ... | 1,013.30 |
| | | Capital | 50,000.00 | ... | 50,000.00 |
| 21 | Water Resources | Revenue | 2.00 | ... | 2.00 |
| 22 | Health and Family Welfare | Revenue | 10,047.68 | ... | 10,047.68 |
| | | Capital | 1,463.83 | ... | 1,463.83 |
| 23 | Labour | Revenue | 1,858.68 | ... | 1,858.68 |
| 25 | Kannada and Culture | Revenue | 80.00 | ... | 80.00 |
| 26 | Planning, Statistics, Science and | Revenue | 139.67 | ... | 139.67 |
| | Technology | Capital | 1.00 | ... | 1.00 |
| 27 | Law | Revenue | 833.93 | ... | 833.93 |
| 28 | Parliamentary Affairs and Legislation | Revenue | 70.00 | 25.00 | 95.00 |
| 29 | Debt Servicing | Revenue | ... | 0.01 | 0.01 |
| | | Capital | 11.40 | ... | 11.40 |
| | **TOTAL** | **Revenue** | **3,40,378.37** | **601.76** | **3,40,980.13** |
| | | **Capital** | **1,04,504.61** | **...** | **1,04,504.61** |
| | **Grand Total** | | **4,44,882.98** | **601.76** | **4,45,484.74** |

## STATEMENT OF OBJECTS AND REASONS

This Bill is introduced in pursuance of the provisions of Article 205 (1) (a) of the Constitution of India to provide for the appropriation out of the Consolidated Fund of the State towards defraying the several charges which will come in course of payment during the part of the Financial Year 2013-14.

**SIDDARAMAIAH**
Chief Minister and
Minister for Finance

**P. OMPRAKASHA**
Secretary
Karnataka Legislative Assembly


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫) | ನಂ. ೧೭೧ |
| **Part – IV-A** | **Bangalore, Wednesday, February 26, 2014 (Phalguna 7, Shaka Varsha 1935)** | **No. 171** |


## KARNATAKA LEGISLATIVE ASSEMBLY SECRETARIAT

### NOTIFICATION

**No. KLA/LGA/35/LA Bill/2014, Bangalore, Dated: 26-2-2014**

The following Bill was introduced in Legislative Assembly on 26-2-2014

## ಕರ್ನಾಟಕ ವಿಧಾನ ಸಭೆ
## ಹದಿನಾಲ್ಕನೇ ವಿಧಾನ ಸಭೆ
## ಮೂರನೇ ಅಧಿವೇಶನ

## ಕರ್ನಾಟಕ ಮೋಟಾರು ವಾಹನಗಳ ತೆರಿಗೆ (ತಿದ್ದುಪಡಿ) ವಿಧೇಯಕ, 2014

**(2014ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 35)**

ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ನ್ನು (1957ರ ಕರ್ನಾಟಕ ಅಧಿನಿಯಮ 35) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಮೋಟಾರು ವಾಹನಗಳ ತೆರಿಗೆ (ತಿದ್ದುಪಡಿ) ಅಧಿನಿಯಮ, 2014 ಎಂದು ಕರೆಯತಕ್ಕದ್ದು.

(2) ಇದು 2014ನೇ ಮಾರ್ಚ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ 35) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 3ನೇ ಪ್ರಕರಣದ (1)ನೇ ಉಪಪ್ರಕರಣದ ನಾಲ್ಕನೇ ಪರಂತುಕದಲ್ಲಿ,–

(i) ವಿವರಣೆಗೆ ವಿವರಣೆ 1 ಎಂದು ಮರು ಸಂಖ್ಯೆ ನೀಡತಕ್ಕದ್ದು ಮತ್ತು ಹಾಗೆ ಮರುಸಂಖ್ಯೆ ನೀಡಲಾದ ವಿವರಣೆ 1ರ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**ವಿವರಣೆ 2.–** ಕರ್ನಾಟಕ ರಾಜ್ಯದ ಹೊರಗೆ ನೋಂದಣಿಯಾಗಿದ್ದು ಮತ್ತು ಮೂವತ್ತು ದಿನಗಳು ಮೀರಿದ ಅವಧಿಗಾಗಿ ರಾಜ್ಯದಲ್ಲಿ ಇರುವ ಮೋಟಾರು ವಾಹನಗಳ ಸಂಬಂಧದಲ್ಲಿ, ಮೋಟಾರು ವಾಹನಗಳ ಅಧಿನಿಯಮ, 1988ರ (1988ರ ಕೇಂದ್ರ ಅಧಿನಿಯಮ 59) ಉಪಬಂಧಗಳಲ್ಲಿ ಮತ್ತು ಯಾವುದೇ ನ್ಯಾಯಾಲಯದ ಯಾವುದೇ ತೀರ್ಪು ಅಥವಾ ಆದೇಶದಲ್ಲಿ ಏನೇ ಒಳಗೊಂಡಿದ್ದರೂ, ಭಾಗಗಳು ಎ1, ಎ2, ಎ4, ಎ5, ಎ6, ಎ7 ಮತ್ತು ಸಂದರ್ಭಾನುಸಾರವಾಗಿ ಎ8 ಇವುಗಳಲ್ಲಿ ನಿರ್ದಿಷ್ಟಪಡಿಸಲಾದಂತೆ ತೆರಿಗೆಯನ್ನು ವಿಧಿಸತಕ್ಕದ್ದು." ಮತ್ತು

(ii) ಡಿ ಖಂಡದಲ್ಲಿ, "ಹದಿನೈದು ಲಕ್ಷ ರೂಪಾಯಿಗಳಿಗೆ ಮೀರಿದ" ಎಂಬ ಪದಗಳಿಗೆ ಮೊದಲು, "ರಾಜ್ಯದ ಹೊರಗೆ ನೋಂದಾಯಿಸಲಾದುದನ್ನು ಮತ್ತು ಮೋಟಾರು ವಾಹನಗಳ ಅಧಿನಿಯಮ, 1988ರ (1988ರ ಕೇಂದ್ರ ಅಧಿನಿಯಮ 59) 88ನೇ ಪ್ರಕರಣದ (9)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪರ್ಮಿಟ್‌ನಲ್ಲಿ ಒಳಗೊಂಡಿರುವುಗಳನ್ನು ಹೊರತುಪಡಿಸಿ" ಎಂಬ ಪದಗಳನ್ನು, ಅಂಕಿಗಳನ್ನು, ಆವರಣ ಚಿಹ್ನೆಗಳನ್ನು ಮತ್ತು ಅಲ್ಪವಿರಾಮ ಚಿಹ್ನೆಯನ್ನು ಸೇರಿಸತಕ್ಕದ್ದು.

3. **ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಅನುಸೂಚಿಯಲ್ಲಿ,–

(1) ಭಾಗ ಎ ಯಲ್ಲಿ, 4ನೇ ಬಾಬಿನಲ್ಲಿ,–

(i) (1) ನೇ ಉಪಬಾಬಿನ (ಬಿ) ಖಂಡಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

| | |
|---|---|
| **"(ಬಿ) (ಸಿ)ಖಂಡದಲ್ಲಿ ತೆರಿಗೆಗೆ ಹೊಣೆಯಾಗಿರುವುದನ್ನು ಹೊರತುಪಡಿಸಿದ ಮೋಟಾರು ಕ್ಯಾಬ್‌ಗಳು, ಪ್ರತಿಯೊಬ್ಬ ಪ್ರಯಾಣಿಕನಿಗೆ"** | **100.00** |

(ii) (ಬಿ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

| | |
|---|---|
| **"(ಸಿ) ರಾಜ್ಯದ ಹೊರಗೆ ನೋಂದಣಿಯಾಗಿರುವ ಮತ್ತು ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1988ರ (1988ರ ಕೇಂದ್ರ ಅಧಿನಿಯಮ 59) 88ನೇ ಪ್ರಕರಣದ (9)ನೇ ಉಪಪ್ರಕರಣದ ಅಡಿಯಲ್ಲಿ ನೀಡಲಾದ ಪರ್ಮಿಟ್‌ನಲ್ಲಿ ಒಳಗೊಂಡಿರುವ ಮೋಟಾರು ಕ್ಯಾಬುಗಳು"** | **500.00** |

(iii) (4)ನೇ ಉಪಬಾಬಿನ (2)ನೇ ಅಂಕಣದಲ್ಲಿ "ಆರು ಪ್ರಯಾಣಿಕರನ್ನು ಒಯ್ಯಲು ಅನುಮತಿಸಲಾಗಿರುವಂಥ ವಾಹನಗಳು (ಮೋಟಾರು ಕ್ಯಾಬ್‌ಗಳು ಹಾಗೂ ಮ್ಯಾಕ್ಸಿ ಕ್ಯಾಬ್‌ಗಳು)" ಎಂಬ ಪದಗಳು ಮತ್ತು ಆವರಣ ಚಿಹ್ನೆಗಳಿಗೆ "ಮ್ಯಾಕ್ಸಿ ಕ್ಯಾಬ್‌ಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(2) ಭಾಗ 8ರಲ್ಲಿ, ಶೀರ್ಷಿಕೆಯಲ್ಲಿ "ಹದಿನೈದು ಲಕ್ಷ ರೂಪಾಯಿಗಳಿಗೆ ಮೀರಿದ" ಎಂಬ ಪದಗಳಿಗೆ ಮೊದಲು, "ರಾಜ್ಯದ ಹೊರಗೆ ನೋಂದಾಯಿಸಲಾದುದನ್ನು ಮತ್ತು ಮೋಟಾರು ವಾಹನಗಳ ಅಧಿನಿಯಮ, 1988ರ (1988ರ ಕೇಂದ್ರ ಅಧಿನಿಯಮ 59) 88ನೇ ಪ್ರಕರಣದ (9)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪರ್ಮಿಟ್‌ನಲ್ಲಿ ಒಳಗೊಂಡಿರುವುಗಳನ್ನು ಹೊರತುಪಡಿಸಿ" ಎಂಬ ಪದಗಳನ್ನು, ಅಂಕಿಗಳನ್ನು, ಆವರಣ ಚಿಹ್ನೆಗಳನ್ನು ಮತ್ತು ಅಲ್ಪವಿರಾಮ ಚಿಹ್ನೆಯನ್ನು ಸೇರಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2014–15ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾಡಿದ ಪ್ರಸ್ತಾವಗಳನ್ನು ಜಾರಿಗೆ ತರುವುದಕ್ಕಾಗಿ ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ನ್ನು (1957ರ ಕರ್ನಾಟಕ ಅಧಿನಿಯಮ ಸಂಖ್ಯೆ:35) ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ರಾಮಲಿಂಗಾರೆಡ್ಡಿ**
ಸಾರಿಗೆ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ ಸಂಖ್ಯೆ:35) ಉದ್ಧೃತ ಭಾಗ**

**Xxx xxx xxx**

**3.ತೆರಿಗೆಯನ್ನು ವಿಧಿಸುವುದು.– Xxx xxx xxx**

**ವಿವರಣೆ:** ಮೋಟಾರು ವಾಹನಗಳ ನೋಂದಣಿಯ ಪ್ರಮಾಣ ಪತ್ರವು ಚಾಲ್ತಿಯಲ್ಲಿರುವುದೋ ಆ ಮೋಟಾರು ವಾಹನವನ್ನು, ಈ ಅಧಿನಿಯಮದ ಉದ್ದೇಶಗಳಿಗಾಗಿ ರಸ್ತೆಗಳ ಮೇಲಿನ ಉಪಯೋಗಕ್ಕಾಗಿ ಸೂಕ್ತವಾದ ವಾಹನವೆಂದು ಭಾವಿಸತಕ್ಕದ್ದು.

**Xxx xxx xxx**

(ಡಿ) ಹದಿನೈದು ಲಕ್ಷ ರೂಪಾಯಿಗಳಿಗೆ ಮೀರಿದ ಬೆಲೆಯ ಮೋಟಾರು ಕ್ಯಾಬುಗಳ ಸಂದರ್ಭದಲ್ಲಿ, ಅನುಸೂಚಿಯ ಭಾಗ–ಎ8ರಲ್ಲಿ ನಿರ್ದಿಷ್ಟಪಡಿಸಲಾದ ದರಗಳಲ್ಲಿ ತೆರಿಗೆಯನ್ನು ವಿಧಿಸತಕ್ಕದ್ದು.

**Xxx xxx xxx**

**ಅನುಸೂಚಿ: Xxx xxx xxx**

(ಬಿ) ಐದು ಪ್ರಯಾಣಿಕರನ್ನು ಮೀರದ (ಮೋಟಾರು ಕ್ಯಾಬ್), ಪ್ರತಿ ಪ್ರಯಾಣಿಕನಿಗೆ 100.00

**Xxx xxx xxx**

(4) ಆರು ಪ್ರಯಾಣಿಕರನ್ನು ಒಯ್ಯಲು ಅನುಮತಿಸಲಾಗಿರುವ ವಾಹನಗಳು (ಮೋಟಾರು ಕ್ಯಾಬ್‌ಗಳು ಮತ್ತು ಮ್ಯಾಕ್ಸಿ ಕ್ಯಾಬ್‌ಗಳು);–

**Xxx xxx xxx**'

**ಭಾಗ–ಎ8**

[ 3(1) ಪ್ರಕರಣ ನೋಡಿ ]

**ಹದಿನೈದು ಲಕ್ಷ ರೂಪಾಯಿಗಳಿಗೆ ಮೀರಿದ ಬೆಲೆಯ ಮೋಟಾರು ಕ್ಯಾಬ್‌ಗಳಿಗೆ ಜೀವಾವಧಿ ತೆರಿಗೆ**

**Xxx xxx xxx**'

## KARNATAKA LEGISLATIVE ASSEMBLY

## FOURTEENTH LEGISLATIVE ASSEMBLY

## THIRD SESSION

## THE KARNATAKA MOTOR VEHICLES TAXATION (AMENDMENT) BILL, 2014

**(L.A. Bill No. 35 of 2014)**

A Bill further to amend the Karnataka Motor Vehicles Taxation Act, 1957.

Whereas it is expedient further to amend the Karnataka Motor Vehicles Taxation Act, 1957 (Karnataka Act 35 of 1957) for the purposes hereinafter appearing;

Be it enacted by the Karnataka State Legislature in the Sixty fifth year of the Republic of India as follows:-

**1. Short title and commencement**:- (1) This Act may be called the Karnataka Motor Vehicles Taxation (Amendment) Act, 2014.

(2) It shall come into force with effect from the first day of March, 2014.

**2. Amendment of section 3.-** In the Karnataka Motor Vehicles Taxation Act, 1957 (Karnataka Act 35 of 1957) (hereinafter referred to as the principal Act), in section 3, in sub section (1), in the fourth proviso,-

(i) the explanation shall be renumbered as Explanation 1 and after explanation 1 as so renumbered, the following shall be inserted, namely:-

"**Explanation-2.-** In respect of motor vehicles registered outside the State of Karnataka and which are in the State for a period exceeding thirty days, notwithstanding anything contained in the provisions of the Motor Vehicles Act, 1988 (Central Act 59 of 1988), and in any order or direction contained in any judgment or order of any Court, tax shall be levied as specified in Parts A1, A2, A4, A5, A6, A7 and A8 as the case may be"; and

(ii) in clause (d), after the words "the cost of which exceeds rupees fifteen lakhs", the words, figures and brackets "other than those registered outside the State and covered with a permit issued under sub-section (9) of section 88 of the Motor Vehicles Act, 1988 (Central Act 59 of 1988)" shall be inserted.

**3. Amendment of Schedule.-** In schedule to the Principal Act,-

(1) in part A, in item 4,-

(i) in sub-item (1), for clause (b) the following shall be substituted, namely:-

| | |
|---|---|
| "(b) Motor Cabs other than those liable to be taxed in clause (c) for every passenger" | 100.00 |

(ii) after clause(b), the following shall be inserted, namely:-

| | |
|---|---|
| "(c) Motor cabs registered outside the State and covered with a permit issued under sub-section (9) of section 88 of the Motor Vehicles Act, 1988 (Central Act 59 of 1988) for every passanger" | 500.00 |

(iii) in sub-item (4), in column (2), for the words and brackets "Vehicles permitted to carry six passengers (Motor Cabs and Maxi Cabs)", the words "Maxi Cabs" shall be substituted.

(2) in Part A8, in the heading, after the words "the cost of which exceeds rupees fifteen lakhs", the words, figures and brackets "other than those registered outside the State and covered with a permit issued under sub-section (9) of section 88 of the Motor Vehicles Act, 1988 (Central Act 59 of 1988)" shall be inserted.

## STATEMENT OF OBJECTS AND REASONS

To give effect to the proposals made in the Budget Speech of 2014-15, it is considered necessary to amend the Karnataka Motor Vehicles Taxation Act, 1957 (Karnataka Act No. 35 of 1957).

Hence, the Bill.

## FINANCIAL MEMORANDUM

There is no extra expenditure involved in the proposed legislative measure.

**RAMALINGAREDDY**
Minister for Transport

**P. OMPRAKASHA**
Secretary
Karnataka Legislative Assembly

## ANNEXURE

**Extract from the Karnataka Motor Vehicles Taxation Act, 1957 (Karnataka Act No. 35 of 1957)**

**XX XX XX**

**3. Levy of tax.**- (1) **XXX XXX XXX**

**Explanation.—**A motor vehicle of which the certificate of registration is current shall, for the purposes of this Act, be deemed to be a vehicle suitable for use on roads.

**XXX XXX XXX**

(d) in the case of Motor Cabs the cost of which exceeds Rupees ten lakhs, tax shall be levied at the rates specified in Part-A8 of the schedule.

**XXX XXX XXX**

**Schedule XXX XXX XXX**

(b) Not more than five passengers (motor cab), for every passenger 100.00

**XXX XXX XXX**

(4) Vehicles permitted to carry six passengers (motor cabs and Maxicabs);—

**XXX XXX XXX**

**Part-A8**

**[See Section 3 (1) ]**

**Lifetime Tax for Motor Cabs the cost of which exceeds Rupees ten lakhs**

**XXX XXX XXX**

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೨೬, ೨೦೧೪ (ಫಾಲ್ಗುಣ ೭, ಶಕ ವರ್ಷ ೧೯೩೫) | ನಂ. ೧೭೨ |
|---|---|---|
| Part – IV-A | Bangalore, Wednesday, February 26, 2014 (Phalguna 7, Shaka Varsha 1935) | No. 172 |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/36/LA Bill/2014, Bangalore, Dated: 26-2-2014**

The following Bill was introduced in Legislative Assembly on 26-2-2014

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**ಮೂರನೇ ಅಧಿವೇಶನ**

## ಕರ್ನಾಟಕ ಸ್ಟ್ಯಾಂಪು (ತಿದ್ದುಪಡಿ) ವಿಧೇಯಕ, 2014

**(2014ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 36)**

ಕರ್ನಾಟಕ ಸ್ಟ್ಯಾಂಪು ಅಧಿನಿಯಮ, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನುಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಸ್ಟ್ಯಾಂಪು ಅಧಿನಿಯಮ, 1957ನ್ನು (1957ರ ಕರ್ನಾಟಕ ಅಧಿನಿಯಮ 34) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಸ್ಟ್ಯಾಂಪು (ತಿದ್ದುಪಡಿ) ಅಧಿನಿಯಮ, 2014 ಎಂದು ಕರೆಯತಕ್ಕದ್ದು.

(2) ಇದು 2014ರ ಮಾರ್ಚ್ 1ನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 9ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಸ್ಟ್ಯಾಂಪು ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ 34) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 9ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದಲ್ಲಿ,–

(i) ಆರನೇ ಪರಂತುಕದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಅಲ್ಲದೇ ಪರಂತು, ರಾಜ್ಯ ಸರ್ಕಾರವು, ಸಾರ್ವಜನಿಕ ಹಿತಾಸಕ್ತಿಯಲ್ಲಿ, ಅಧಿಸೂಚನೆಯ ಮೂಲಕ, ಕಾಲಕಾಲಕ್ಕೆ ಅದರಲ್ಲಿ ನಿರ್ದಿಷ್ಟಪಡಿಸಬೇಕಾದಂತೆ, ಈ ಮುಂದಿನವುಗಳ ಮೇಲೆ, ಎಂದರೆ:–

(ಎ) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಮತ್ತು ಸಂಬಂಧಪಟ್ಟ ಹಂಚಿಕೆ ಪಡೆದವನ (allottee) ಮೂಲಕ ಅಥವಾ ಅವರ ನಡುವೆ, ಪ್ರಶ್ನಿತವಾಗಿರುವ ಭೂಮಿಯನ್ನು ಅಧಿಸೂಚನೆಯಿಂದ ತೆಗೆದುಹಾಕಲಾದ (denotified land) ಪರಿಣಾಮವಾಗಿ ಮತ್ತು ಯುಕ್ತವಾಗಿ ಸ್ಟ್ಯಾಂಪು ಮಾಡಲಾದ ಹಿಂದಿನ ಕ್ರಯಪತ್ರದ ರದ್ದತಿಯನ್ನು ಅನುಸರಿಸಿ, ಪರ್ಯಾಯ ಸಮಾನವಾದ ನಿವೇಶನದ ಹಂಚಿಕೆಯ ಸಂಬಂಧದಲ್ಲಿ, ಮತ್ತು

(ಬಿ) ಸಂಬಂಧಪಟ್ಟ ವ್ಯಕ್ತಿಗಳ ಮೂಲಕ ಅಥವಾ ನಡುವೆ ಬರೆದುಕೊಟ್ಟ ಸರ್ಕಾರಿ ಆದೇಶ ಸಂಖ್ಯೆ ಸಿಐ 17 ಎಸ್‌ಪಿಐ 2012 ದಿನಾಂಕ: 06–02–2013ರಲ್ಲಿ ನಿರ್ದಿಷ್ಟಪಡಿಸಲಾದ ಅಥವಾ ಕರ್ನಾಟಕ ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸುವ ಕರ್ನಾಟಕ ಏರೋಸ್ಪೇಸ್ ಪಾಲಿಸಿ 2013–23 ರೊಂದಿಗಿನ ಸಂಬಂಧದಲ್ಲಿ,

– ಬರೆದುಕೊಟ್ಟ ಯಾವುದೇ ಲಿಖಿತದ ಮೇಲಿನ ಸ್ಟ್ಯಾಂಪು ಶುಲ್ಕಗಳನ್ನು ಕಡಿಮೆ ಮಾಡಬಹುದು ಅಥವಾ ಮಾಫಿ ಮಾಡಬಹುದು."

(ii) ಏಳನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಅಲ್ಲದೇ ಪರಂತು, ರಾಜ್ಯ ಸರ್ಕಾರವು, ಸಾರ್ವಜನಿಕ ಹಿತಾಸಕ್ತಿಯಿಂದ, ಅಧಿಸೂಚನೆಯ ಮೂಲಕ, ಅಧಿಸೂಚನೆ ಸಂಖ್ಯೆ ಆರ್‌ಡಿ 144 ಮುನೋಮು 2003 ದಿನಾಂಕ 23–04–2003ರಲ್ಲಿ ನಿರ್ದಿಷ್ಟಪಡಿಸಲಾದ ಲಿಖಿತಗಳ ಮೇಲೆ ಪಾವತಿಸಬೇಕಾದ ಸ್ಟ್ಯಾಂಪು ಸುಂಕವನ್ನು ಕಡಿಮೆ ಮಾಡಬಹುದು ಅಥವಾ ಮಾಫಿ ಮಾಡಬಹುದು."

**3. ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಅನುಸೂಚಿಯ 5ನೇ ಅನುಚ್ಛೇದದಲ್ಲಿ,–

(i) (ಇ) ಖಂಡದ (3)ನೇ ಅಂಕಣದಲ್ಲಿ, ಕೊನೆಯಲ್ಲಿರುವ ಪರಂತುಕಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಪರಂತು, ಅನುಚ್ಛೇದ 41(ಇ) ಅಥವಾ ಸಂದರ್ಭಾನುಸಾರವಾಗಿ ಅನುಚ್ಛೇದ 41(ಇಬಿ) ಇವುಗಳ ಅಡಿಯಲ್ಲಿ ಮುಖ್ತ್ಯಾರನಾಮೆಯ ಮೇಲೆ ಪಾವತಿಸಲಾದ ಮುದ್ರಾಂಕ ಸುಂಕವನ್ನು ಅನುಚ್ಛೇದ 5(ಇ)ರ ಅಡಿಯಲ್ಲಿ ಮಾರಾಟ ಕರಾರು ಪತ್ರದ ಮೇಲೆ ಅಥವಾ ಅದೇ ಸ್ವತ್ತಿಗೆ ಸಂಬಂಧಿಸಿದಂತೆ, ಅದೇ

